# ಶ್ರೀ ವೆಂಕಟೇಶ್ವರಸ್ವಾಮಿಯವರ ದೇವಸ್ಥಾನ, ತಿರುಮಲೆ

## ನಿತ್ಯಪೂಜೆ, ದರ್ಶನಾದಿಗಳ ಕಾರ್ಯಕ್ರಮು,

### ಶನಿ, ಭಾನು, ಸೋಮ ಮತ್ತು ಮಂಗಳವಾರಗಳಲ್ಲಿ

ಉದಯ 3–00 ರಿಂದ 3–30 ವರೆಗೆ ಸುಪ್ರಭಾತ (25/- ರೂ ಟಿಕೆಟ್ ಪಡೆದವರಿಗೆ ಮಾತ್ರ)
,, 3–30 ರಿಂದ 3–45 ವರೆಗೆ ಶುದ್ಧಿ ಇತ್ಯಾದಿ
,, 3–45 ರಿಂದ 4–30 ವರೆಗೆ ತೋಮಾಲಸೇವೆ(ಏಕಾಂತ)
,, 4–30 ರಿಂದ 4–45 ವರೆಗೆ ಕೊಲುವು ಮತ್ತು ಪಂಚಾಂಗ ಶ್ರವಣ
,, 4–45 ರಿಂದ 5–30 ವರೆಗೆ ಮೊದಲನೆಯ ಅರ್ಚನೆ
,, 5–30 ರಿಂದ 6–00 ವರೆಗೆ ಮೊದಲನೆಯ ಗಂಟೆ ಬಲಿ ಮತ್ತು ಶಾತ್ತುಮೊರೆ
,, 6–00 ರಿಂದ 12–00 ವರೆಗೆ ಸರ್ವದರ್ಶನ
ಮಧ್ಯಾಹ್ನ 12–00 ರಿಂದ 1–00 ವರೆಗೆ ಶುದ್ಧಿ ಎರಡನೇ ಅರ್ಚನೆ, (ಏಕಾಂತ)
,, 1–00 ರಿಂದ 7–00 ವರೆಗೆ ಸರ್ವದರ್ಶನ
,, 7–00 ರಿಂದ 8–00 ವರೆಗೆ ಶುದಿ , ರಾತ್ರಿ ಕೈಂಕರ್ಯ
ರಾತ್ರಿ 8–00 ರಿಂದ 12–00 ವರೆಗೆ ಸರ್ವದರ್ಶನ
,, 12–00 ರಿಂದ 12–30 ವರೆಗೆ ಶುದ್ಧಿ
12–30 ಏಕಾಂತಸೇವೆ

### ಬುಧವಾರ, ಸಹಸ್ರ ಕಲಶಾಭಿಷೇಕ

ಉದಯ 3–00 ರಿಂದ 3–30 ವರೆಗೆ ಸುಪ್ರಭಾತ (25/- ರೂ ಟಿಕೆಟ್ ಪಡೆದವರಿಗೆ ಮಾತ್ರ)
,, 3–30 ರಿಂದ 3–45 ವರೆಗೆ ಶುದ್ಧಿ ಇತ್ಯಾದಿ
,, 3–45 ರಿಂದ 4–30 ವರೆಗೆ ತೋಮಾಲಸೇವೆ (ಏಕಾಂತ)
,, 4–30 ರಿಂದ 4–45 ವರೆಗೆ ಕೊಲುವು, ಪಂಚಾಂಗಶ್ರವಣ
,, 4–45 ರಿಂದ 5–30 ವರೆಗೆ ಮೊದಲನೆಯ ಅರ್ಚನೆ
,, 5–30 ರಿಂದ 6–00 ವರೆಗೆ ಮೊದಲನೇ ಗಂಟೆ, ಬಲಿ, ಶಾತ್ತುಮೊರೆ
,, 6–00 ರಿಂದ 8–00 ವರೆಗೆ ಸಹಸ್ರ ಕಲಶಾಭಿಷೇಕ (ಅರ್ಜಿತ) ಶುದ್ಧಿ 2ನೇ ಅರ್ಚನೆ
,, 8–00 ರಾತ್ರಿ 7–00 ವರೆಗೆ ಸರ್ವದರ್ಶನ
ರಾತ್ರಿ 7–00 ರಿಂದ 8–00 ವರೆಗೆ ಶುದ್ಧಿ ಇತ್ಯಾದಿ
,, 8–00 ರಿಂದ 12–00 ವರೆಗೆ ಸರ್ವದರ್ಶನ
,, 12–00 ರಿಂದ 12–30 ವರೆಗೆ ಶುದ್ಧಿ
12–30 ರಿಂದ ಏಕಾಂತಸೇವೆ (ಅರ್ಜಿತ)

### ಗುರುವಾರ, ತಿರುಪ್ಪಾವಡ

ಉದಯ 3–00 ರಿಂದ 3–30 ವರೆಗೆ ಸುಪ್ರಭಾತ (25/- ರೂ ಟಿಕೆಟ್ ಪಡೆದವರಿಗೆ ಮಾತ್ರ)
,, 3–30 ರಿಂದ 3–45 ವರೆಗೆ ಶುದಿ ಇತ್ಯಾದಿ
,, 3–45 ರಿಂದ 4–30 ವರೆಗೆ ತೋಮಾಲಸೇವೆ
,, 4–30 ರಿಂದ 4–45 ವರೆಗೆ ಕೊಲುವು ಮತ್ತು ಪಂಚಾಂಗ ಶ್ರವಣ
,, 4–45 ರಿಂದ 5–30 ವರೆಗೆ ಮೊದಲನೆಯ ಅರ್ಚನೆ
,, 5–30 ರಿಂದ 6–00 ವರೆಗೆ ಮೊದಲನೇ ಗಂಟೆ, ಬಲಿ ಶಾತ್ತುಮೊರೆ
,, 6–00 ರಿಂದ 8–00 ವರೆಗೆ ಸಳ್ಳಿಂಪು, 2 ನೇ ಅರ್ಚನೆ (ಏಕಾಂತ), ತಿರುಪ್ಪಾವಡ ಅಲಂಕರಣ, ಗಂಟೆ ಇತ್ಯಾದಿ
,, 8–00 ರಿಂದ ಸಂಜೆ 6–00 ವರೆಗೆ ಸರ್ವದರ್ಶನ
ಸಂಜೆ 6–00 ರಿಂದ 8–00 ವರೆಗೆ ಶುದ್ಧಿ ಇತ್ಯಾದಿ
ರಾತ್ರಿ 8–00 ರಿಂದ 12–00 ವರೆಗೆ ಪೂಲಂಗಿ ಸರ್ವದರ್ಶನ
,, 12–00 ರಿಂದ 12–30 ವರೆಗೆ ಶುದ್ಧಿ
12–30 ರಿಂದ ಏಕಾಂತಸೇವೆ

### ಶುಕ್ರವಾರ, ಅಭಿಷೇಕ

ಉದಯ 3–00 ರಿಂದ 3–30 ವರೆಗೆ ಸುಪ್ರಭಾತ (25/- ರೂ ಟಿಕೆಟ್ ಪಡೆದವರಿಗೆ ಮಾತ್ರ)
,, 3–30 ರಿಂದ 5–00 ವರೆಗೆ ಸಳ್ಳಿಂಪು ಮತ್ತು ನಿತ್ಯ ಕೈಂಕರ್ಯಗಳು
,, 5–00 ರಿಂದ 7–00 ವರೆಗೆ ಅಭಿಷೇಕ (ಅರ್ಜಿತ)
,, 7–00 ರಿಂದ 8–30 ವರೆಗೆ ಸಮರ್ಪಣೆ
,, 8–30 ರಿಂದ 9–30 ವರೆಗೆ ತೋಮಾಲಸೇವೆ ಮತ್ತು ಅರ್ಚನೆ
,, 9–30 ರಿಂದ 10–00 ವರೆಗೆ ಬಲಿ, ಶಾತ್ತುಮೊರೆ
,, 10–00 ರಿಂದ ರಾತ್ರಿ 7–00 ವರೆಗೆ ಸರ್ವದರ್ಶನ
ರಾತ್ರಿ 7–00 ರಿಂದ 8–00 ವರೆಗೆ ಶುದ್ಧಿ ಇತ್ಯಾದಿ
,, 8–00 ರಿಂದ 12–00 ವರೆಗೆ ಸರ್ವದರ್ಶನ
,, 12–00 ರಿಂದ 12–30 ವರೆಗೆ ಶುದ್ಧಿ
12–30 ಏಕಾಂತಸೇವೆ

---

ಗಮನಿಕೆ :– 1. ಮೇಲಿನ ಕಾರ್ಯಕ್ರಮುಗಳು ಸಮಯಾನುಕೂಲವಾಗಿಯೂ ಪ್ರತ್ಯೇಕ ಕಾರ್ಯಕ್ರಮುಗಳಿಂದಲೂ ಬದಲಾಯಿಸಲ್ಪಡಬಹುದು.

2. ತೋಮಾಲಸೇವೆಯಲ್ಲಿ ಒಬ್ಬರಿಗೆ 50/– ರೂ ಟಿಕೆಟ್, ಅರ್ಚನೆಯಲ್ಲಿ ಒಬ್ಬರಿಗೆ 100/– ರೂ ಟಿಕೆಟ್ ಏಕಾಂತಸೇವೆಯಲ್ಲಿ ಒಬ್ಬರಿಗೆ 50/– ರೂ ಟಿಕೆಟ್, ಪಡೆದಲ್ಲಿ ಪ್ರವೇಶಾವಕಾಶವುಂಟು.

3. ಸರ್ಕಾರ್ ಕಲ್ಯಾಣೋತ್ಸವ, ಅರ್ಜಿತ ಬ್ರಹ್ಮೋತ್ಸವ, ಊಂಜಲ್‌ಸೇವೆ, ವಾಹನ ಸೇವೆಗಳು, ಡೋಲೋತ್ಸವ, ಪ್ಲವೋತ್ಸವ ಮಂಗಳವಾರದಲ್ಲಿ ಮಧ್ಯಾಹ್ನ 1–00 ರಿಂದ 7–00 ನಡುವೆ ಜರುಗುವುವು.



ಪುಟ್ಟಿದೆ ಭುವಿಯೊಳು ಬಹುದಿನ ಕಳೆದೆನೊ ಪುಟ್ಟಿಸ
ಬೇಡವೆನ್ನ ॥ ಪ ॥
ಪಟ್ಟಾಭಿರಾಮನೆ ಪರಮ ಪುರುಷನೆ
ಗಟ್ಟ್ಯಾಗಿ ನಿನ್ನ ಪಾದಗಳ ನಂಬಿದೆ ದೇವ ॥ ಅ.ಪ. ॥
ಎಂಭತ್ತು ನಾಲ್ಕು ಲಕ್ಷಯೋನಿಯ
ಕುಂಭಿಣಿಯೊಳು ಪುಟ್ಟಿ ಬಹುಪಾಪಗಳ ಮಾಡಿ
ಕುಂಭೀಪಾಕದಿ ಬೆಂದೆನೋ
ಅಂಬುಜ ಮಿತ್ರನ ಸುತನಾಳುಗಳ ಕೈಲಿ
ಅಮಿತ ಯಾತನೆಗೊಂಡೆನೊ
ಅಂಬುಜನಾಭನೆ ಅಖಿಳ ಸುರರೊಡೆಯನೆ
ಆರ್ತಾರ್ತಿಹರನೆಂದು ಕೇಳಿ ಬಂದೆನು ನಾನು ೧
ಜೇನಿನೊಳಗೆ ಬಿದ್ದ ನೊಣದಂತೆ ಸತಿಸುತ
ಜನ ಪಾಶ ಬದ್ಧನಾದೆ
ಮೀನು ಮಾಂಸದಾಸೆಗ್ಹೋಗಿ ಸಿಕ್ಕಿದಂತೆ
ಮೋಸ ಹೋದೆನೊ ಬರಿದೆ
ಏಣವು ಕಿಂಕಿಣಿ ಧ್ವನಿಗೆ ಮರುಳಾದಂತೆ
ಇಳೆಯೊಳು ಮಂಕಾದೆನೊ
ಏನೆಂಬೆ ದಾಸರಿ ಕೋಡಗದಂದದಿ
ಕುಣಿಯುವೆ ನಾನೆಲ್ಲ ಜನಗಳ ಮುಂದೆ ೨
ಕಾಯ ಪೋಷಣೆಗಾಗಿ ಹೇಯ ಕರ್ಮಗಳ
ಕಾಲ ಕಾಲದಿ ಮಾಡ್ದೆನೊ
ಜಾಯಾದಿಗಳ ರಕ್ಷಣೆ ಮಾಡೆ ಆದರಿಂದ
ಜಾಗರೂಕನಾದನೊ
ನ್ಯಾಯರಹಿತನಾಗಿ ಗುರು ಹಿರಿಯರ ಪಾದ
ಭಜನೆ ಮಾಡದೆ ಪೋದೆನೊ
ಕಾಯಜನೈಯ್ಯನೆ ಶ್ರೀಕೃಷ್ಣ ರಾಯನೆ
ಕಾಯಬೇಕೆನ್ನಪರಾಧಗಳನು ದೇವ ೩
ಶ್ರೀವ್ಯಾಸರಾಯರು.




ಗೌರವ ಸಂಪಾದಕರು:

ಶ್ರೀ ಪಿ. ವಿ. ಆರ್. ಕೆ. ಪ್ರಸಾದ್, ಐ.ಎ.ಎಸ್.,

ಸಂಪಾದಕ.

ಕೆ. ಸುಬ್ಬಾರಾವು, ಎಂ.ಎ.,

ಉಪಸಂಪಾದಕ:

ಬಿ. ಎನ್. ಶ್ರೀನಿವಾಸನ್ ಎಂ.ಎ.,

ಮುದ್ರಣ.

ಎಂ. ವಿಜಯಕುಮಾರ್‌ರೆಡ್ಡಿ

ಲೇಖನ/ಜಾಹೀರಾತುಗಳಿಗೆ

ಸಂಪಾದಕರು,
ತಿರುಮಲ ತಿರುಪತಿ ದೇವಸ್ಥಾನಗಳು,
ತಿರುಪತಿ

ಪ್ರತಿಗಳಿಗೆ;
ವೆಲ್‌ಫೇರ್ ಆಫೀಸರ್
ಸೇಲ್ಸ್‌ವಿಂಗ್
ತಿರುಮಲ ತಿರುಪತಿ ದೇವಸ್ಥಾನ
ತಿರುಪತಿ.

**ಬಿಡಿ ಪ್ರತಿ ೧-೦೦**

**ವಾರ್ಷಿಕ ಚಂದಾ ೧೨-೦೦**





ಸಂಪುಟ ೧೨] ಏಪ್ರಿಲ್ ೧೯೮೨ [ಸಂಚಿಕೆ ೧೧


# ವಿಷಯಸೂಚಿ


| | | ಪುಟ. ಸಂ. |
|---|---|---|
| ವಾರ್ತಾಲಹರಿ | | ... 3 |
| ಶ್ರೀರಾಮಚಂದ್ರ | ಶ್ರೀ ಕಾರುಪಲ್ಲಿ ಜಾನಕೀರಾಮಯ್ಯ | ... 5 |
| ವಾಲ್ಮೀಕಿಯ ನಿಷಾದ ಶಾಪ | ಶ್ರೀ ವಿ. ಲಕ್ಷ್ಮೀನಾರಾಯಣ | ... 9 |
| ಸಪ್ತರ್ಷಿ ರಾಮಾಯಣ | ಶ್ರೀ ಗುರುರಾಜಾಚಾರ್ಯ ಗುಡಿ | ... 11 |
| ಶ್ರೀ ಶಂಕರಾಚಾರ್ಯರ ಮೋಹ ಮುದ್ಗರ | ಶ್ರೀ ವೆಂಕಟರಾವ್‌ನಾಯಕ | .. 13 |
| ಶ್ರೀ ಕೋದಂಡರಾಮಸ್ವಾಮಿ ದೇವಾಲಯ | ಡಾ ॥ ಕೆ. ಸರ್ವೋತ್ತಮನ್ | ... 15 |
| ಶ್ರೀ ಕೋದಂಡರಾಮಸ್ವಾಮಿ ಸುಪ್ರಭಾತ | ಡಾ ॥ ಎಸ್. ಬಿ. ರಘುನಾಥಾಚಾರ್ಯ | ... 17 |
| **ಯುವವಾಣಿ** | | |
| ಅಧ್ಯಾತ್ಮ ರಾಮಾಯಣ | ಡಾ ॥ ಎನ್. ಅನಂತರಂಗಾಚಾರ್ | ... 21 |
| ಕುವೆಂಪು ಚಿತ್ರಿಸಿದ ಬಾಲಕ ರಾಮಚಂದ್ರ | ಶ್ರೀ ಮು. ಕೃಷ್ಣಪ್ಪ | ... 25 |
| ಪುಸ್ತಕ ಪರಿಚಯ | ಸೀತಾಪ್ರಿಯ | ... 28 |
| **ಗೃಹಲಕ್ಷ್ಮಿ** | | |
| ವಾಲ್ಮೀಕಿಗಳು ಚಿತ್ರಿಸಿದ ಸೀತೆ | ಶ್ರೀ ಮಾಸ್ತಿ ವೆಂಕಟೇಶ ಅಯ್ಯಂಗಾರ್ | ... 29 |
| **ಕಿಶೋರಜಗತ್** | | |
| ಸೀತಾನ್ವೇಷಣೆ | ಶ್ರೀ ವೈ. ನ. ನಾಗರಾಜ | ... 33 |
| ರಾಘವೇಂದ್ರರ ರಾಮಚರಿತೆ | ಶ್ರೀ ಟಿ. ಎಸ್. ಪದ್ಮನಾಭರಾವ್ | ... 37 |


[21 ನೇ ಪುಟದಲ್ಲಿನ 'ಅಧ್ಯಾತ್ಮ ರಾಮಾಯಣ' 'ಅಧ್ಯಾತ್ಮ' ವೆಂದು ತಪ್ಪಾಗಿ ಮುದ್ರಿತವಾಗಿದೆ. ತಿದ್ದಿಕೊಂಡು ಓದಬೇಕಾಗಿ ವಿನಂತಿ]— ಸಂ ॥

# ವಾರ್ತಾಲಹರಿ

## ಕೃತಕ ಅವಯುವ ವಿತರಣೆ

ತಿರುಮಲೆ ತಿರುಪತಿ ಕೇಂದ್ರ ವೈದ್ಯ ಶಾಲೆಯಲ್ಲಿ ಈಚೆಗೆ ನಡೆದ ಸಮಾರಂಭದಲ್ಲಿ 38 ಮಂದಿ ವಿಕಲಾಂಗರಿಗೆ ಕೃತ್ರಿಮ ಅವಯುವಗಳನ್ನು ಉಚಿತವಾಗಿ ನೀಡಲಾಯಿತು.

ತಿ. ತಿ. ದೇ. ಕಾರ್ಯನಿರ್ವಾಹಕ ಮಂಡಳಿಯ ಅಧ್ಯಕ್ಷರಾದ ಶ್ರೀ ಬಿ ನಾಗಿರೆಡ್ಡಿಯವರು ಮುಖ್ಯ ಅತಿಥಿಯಾಗಿ ಮಾತನಾಡುತ್ತ ಪ್ರತಿಭಾಶಾಲಿ ಶ್ರೀ ಪ್ರಸಾದ್ (ಕಾರ್ಯ ನಿರ್ವಹಣಾಧಿಕಾರಿ) ಅವರ ಕಾರ್ಯ ದೀಕ್ಷೆಯಿಂದ ಈ ಕಾರ್ಯಕ್ರಮ ಜಯಪ್ರದವಾಗುತ್ತಿದೆಯೆಂದೂ, ಈ ರೀತಿಯ ಪ್ರಜಾಹಿತ ಕಾರ್ಯಕ್ರಮಗಳಲ್ಲಿ ದಾನಿಗಳು ದೊರೆತಲ್ಲಿ ಮತ್ತಷ್ಟುಮಂದಿ ವಿಕಲಾಂಗರು ಪ್ರಯೋಜನ ಪಡೆಯಬಲ್ಲರೆಂದೂ ಹೇಳುತ್ತ, ಇಂತಹ ಜನಸೇವಾ ಯೋಜನೆಯಲ್ಲಿ ದಾನಗಳನ್ನು ಆಕರ್ಷಿಸಲು ಮೊದಲನೆಯದಾಗಿ ತಮ್ಮ 25000 ರೂಗಳ ದೇಣಿಗೆಯನ್ನು ಪ್ರಕಟಿಸುತ್ತ, ಕೃತ್ರಿಮ ಅವಯುವಗಳನ್ನು ಬಹೂಕರಿಸಿದರು.

ಅಧ್ಯಕ್ಷತೆ ವಹಿಸಿದ್ದ ಶ್ರೀ ಪಿ. ವಿ. ಆರ್. ಕೆ. ಪ್ರಸಾದರು ಸಾಂಘಿಕ ಸೇವಾ ಕಾರ್ಯದಲ್ಲಿ ಒಂದು ಭಾಗವಾದ ಈ ಕೇಂದ್ರವನ್ನು ಸ್ಥಾಪಿಸಿ ಒಂದು ವರ್ಷವಾಯಿತೆಂದೂ, ವಿಕಲಾಂಗರನ್ನು ಮೊದಲೇ ಪರೀಕ್ಷಿಸಿ ಅವರಿಗೆ ಅಗತ್ಯವಾದ ಕೃತಕ ಅಂಗಾಂಗಗಳನ್ನು ತಯಾರಿಸಲಾಗುವುದೆಂದೂ, ಈ ಕೆಲಸದಲ್ಲಿ ಅಹರ್ನಿಶಿ ಶ್ರಮಿಸುತ್ತಿರುವ ಡಾಕ್ಟರ್ ರಾಜು ಅವರನ್ನೂ ಕೇಂದ್ರ ಕಾರ್ಮಿಕರನ್ನೂ ಅಭಿನಂದಿಸಿದರು.

ತಿ ತಿ. ದೇ. ಸಂಯುಕ್ತ ಕಾರ್ಯನಿರ್ವಹಣಾಧಿಕಾರಿ ಶ್ರೀ ಸುಬ್ಬರಾಯುಲು ಅವರು ಕಾರ್ಯಕ್ರಮದಲ್ಲಿ ಮಾತನಾಡಿದರು. ಸಭೆಯನ್ನು ಸ್ವಾಗತಿಸುತ್ತ ಪೌರಸಂಬಂಧಾಧಿಕಾರಿ ಶ್ರೀ ರಾವುಲಸೂರ್ಯನಾರಾಯಣಮೂರ್ತಿ ಅವರು ಕೇಂದ್ರ ಕಾರ್ಯಕ್ರಮಗಳ ಪರಿಚಯ ನೀಡಿದರು. ಈ ಸಂದರ್ಭದಲ್ಲಿ ಕೇಂದ್ರದ ನಾಲ್ವರು ಉದ್ಯೋಗಿಗಳಿಗೆ ಪ್ರಶಂಸಾ ಪತ್ರಗಳನ್ನೂ, ಅಶಕ್ತರಾದ ಮೂವರಿಗೆ ಕೈಯಿಂದ ನಡೆಸುವ ರಿಕ್ಷಾಗಳನ್ನೂ ಬಹುಮಾನಿಸಲಾಯಿತು. ಡಾಕ್ಟರ್ ಉಷಾರಾಣಿಯವರು ವರದಿಯನ್ನು ಓದಿದರು. ಡಾಕ್ಟರ್ ನರಸಿಂಹರೆಡ್ಡಿ ಅವರು ಸಭೆಯನ್ನು ವಂದಿಸಿದರು.



ಸಂಪ್ರೋಕ್ಷಣೆಯಲ್ಲಿ ಆನಂದನಿಲಯ ವಿಮಾನ

## ಆಲಯ ಸಂಪ್ರೋಕ್ಷನೆ

ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯದ ಆನಂದ ನಿಲಯ ವಿಮಾನದ ಸಂಪ್ರೋಕ್ಷಣಾ ಕಾರ್ಯ ಈಚೆಗೆ ಸಡಗರದಿಂದ ನಡೆಯಿತು. ಸುಮಾರು ಲಕ್ಷರೂಪಾಯಿಗಳಿಗೂ ಹೆಚ್ಚಿನ ವೆಚ್ಚದ ಈ ಕಾರ್ಯಕ್ರಮದಲ್ಲಿ ಆನಂದ ನಿಲಯದ ಗೋಪುರದ ಜೀರ್ಣೋದ್ಧಾರ, ಧ್ವಜಸ್ತಂಭದ ಜೀರ್ಣೋದ್ಧಾರ ಕಾರ್ಯಗಳು ನಡೆದವು.

ಈ ಸಂಪ್ರೋಕ್ಷಣೆಯ ಪವಿತ್ರ ಕಾರ್ಯದಲ್ಲಿ ದೇಶ್ಯಾದಂತ ಹರಡಿದ ಹೆಸರಾಂತ ವೇದ ವಿದ್ವಾಂಸರು ತಿರುಮಲೆಯಲ್ಲಿ ಸೇರಿ ಚತುರ್ವೇದ ಘೋಷ ಕಾರ್ಯದಲ್ಲಿ ಉತ್ಸಾಹ ಸಂಭ್ರಮಗಳಿಂದ ಭಾಗವಹಿಸಿದರು.

ಈ ಸಂಪ್ರೋಕ್ಷಣೆಯಲ್ಲಿ ಕಾಲದಲ್ಲಿ ಯಾತ್ರಿಕರ ಅನುಕೂಲಕ್ಕಾಗಿ, ಪೂಜಾವಿಧಿಗಳ ನಿರ್ವಹಣೆಗಾಗಿ ವಿಶೇಷವಾದ ಬಾಲಾಲಯವನ್ನು ಏರ್ಪಡಿಸಲಾಗಿದ್ದಿತು. (ಈ ಸಂಪ್ರೋಕ್ಷಣೆಯ ಚಿತ್ರವನ್ನೂ ನೀಡಲಾಗಿದೆ;)

ಧ್ವಜಸ್ತಂಭದ ಒಳಗಣ ಶ್ರೀಗಂಧದ ಮರವನ್ನು (ಸುಮಾರು 60 ಅಡಿಗಳ ಉದ್ದ) ಕೇರಳದ ಸರ್ಕಾರದ ವತಿಯಿಂದ ಪಡೆಯಲಾಯಿತು. ಧ್ವಜಸ್ತಂಭದ ಜೀರ್ಣೋದ್ಧಾರಕಾರ್ಯ ಈ ಹಿಂದೆ ನಡೆದು 90 ವರ್ಷಗಳಾಗಿದ್ದವು

# ನಾಳೆ ಮಾಡುವುದನಿಂದೇ ಮಾಡಿ
# ಇಂದು ಮಾಡುವುದನೀಗಲೇ ಮಾಡಿ

( ಮಹಾಭಾರತ 12 – 6534 )

## ಕಾಲ ತರಂಗವಾರಿಗೂ ಕಾಯದು
## ಉಳಿತಾಯ ಮಾಡಲಿದುವೆ ಸುಸಮಯ

**ನಮ್ಮ ಬ್ಯಾಂಕ್‌ನ ಸುಪ್ರಸಿದ್ಧ ಬಹುಮುಖ ಉಳಿತಾಯ ಯೋಜನೆಗಳಲ್ಲಿ ತಮ್ಮ ಹಣವನ್ನು ಕೂಡಿಸಿರಿ.**

**ತಮ್ಮ ಅಗತ್ಯಗಳ ಪೂರೈಕೆಗೆ ಈ ಉಳಿತಾಯ ಬಳಕೆಗೆ ಬರುವಂತೆ ನಾವು ಮಾಡುತ್ತೇವೆ.**

ಹೆಚ್ಚಿ . ವಿವರಗಳಿಗಾಗಿ :

**ನಮ್ಮ ಯಾವುದೇ ಶಾಖೆಯನ್ನು ಸಂದರ್ಶಿಸಿ ಅಥವಾ ಬರೆಯಿರಿ.**

# ದಿ ಕರೂರ್ ವೈಶ್ಯ ಬ್ಯಾಂಕ್ ಲಿಮಿಟೆಡ್

ನೋಂದಾಯಿತ ಕೇಂದ್ರ ಕಚೇರಿ : ಜವಹರ್ ಬಜಾರ್,

## ಕರೂರ್ ೬೩೯೦೦೧



**ತಮ್ಮನ್ನು ಅಭಿವೃದ್ಧಿಯತ್ತ ಕರೆದೊಯ್ಯುವ ಬ್ಯಾಂಕ್**

ಜಿ. ವೆಂಕಟೇಶಂ,
ಛೇರ್ಮನ್.

# ಶ್ರೀ ರಾಮಚಂದ್ರ

" ಶ್ರೀಕಂಠಚಾಪ ಖಂಡನ
ಪಾಕಾರಿ ಪ್ರಮುಖ ವಿನುತ ಭಂಡನ
ವಿಲಸತ್
ಕಾಕುತ್ಸ್ಥ ವಂಶ ಮಂಡನ
ರಾಕೇಂದು ಯಶೋವಿಶಾಲ
ರಾಮನೃಪಾಲ! "

ಇದು ವೀರ ರಾಘವನ ಸ್ತುತಿ. ಇದರ ಭಾವ " ಹರನ ಧನುಸ್ಸನ್ನು ಮುರಿದವನೂ, ಇಂದ್ರನೇ ಮೊದಲಾದ ದೇವತೆಗಳಿಂದ ಪ್ರಶಂಸಿಲ್ಪಟ್ಟ ಸಮರ ಪಾಂಡಿತ್ಯ ಉಳ್ಳವನೂ, ಕಾಕುತ್ಸ್ಥ ವಂಶಾಲಂಕಾರನೂ. ಹುಣ್ಣಿಮೆಯ ಚಂದ್ರನಂತೆ ದಿಗಂತ ವಿಶ್ರಾಂತ ನಿರ್ಮಲ ಕೀರ್ತಿಉಳ್ಳವನೂ ಆದ ಶ್ರೀರಾಮ ಭೂಪಾಲನಿಗೆ ನಮಸ್ಕಾರ " ಎಂದು. ಶ್ರೀರಾಮನ ಕದನ ಕೌಶಲ ವಿಶ್ವವಿಖ್ಯಾತ. ರಾಮನ ಅಸ್ತ್ರಪಾಂಡಿತ್ಯವನ್ನು ಗೀತಾಚಾರ್ಯನಾದ ಶ್ರೀ ಕೃಷ್ಣನು ಭಗವದ್ಗೀತೆಯಲ್ಲಿ – ವಿಭೂತಿಯೋಗವನ್ನೂ ಅದರ ವೈಭವವನ್ನೂ ವರ್ಣಿಸುತ್ತ--ಸೃಷ್ಟಿಯಲ್ಲಿ ಶ್ರೇಷ್ಠವಾದ ವಸ್ತುಗಳನ್ನೂ, ಶ್ರೇಷ್ಠ ಪುರುಷರನ್ನೂ ಹೇಳುವಾಗ 'ರಾಮಶ್ಶಸ್ತ್ರಭೃತಾಮಹಂ' ಎಂದಿದ್ದಾನೆ. ಈ ಮಾತಿನಂತೆಯೇ ವಾಲ್ಮೀಕಿ ಮಹರ್ಷಿ ರಾಮನ ಶೌರ್ಯವನ್ನು ಕೊಂಡಾಡುತ್ತ 'ರಾಮಃ ಧರ್ಮಭೃತಾಂವರ' ಎಂದು ಸಾರಿದ್ದಾನೆ. ವಶ್ಯವಾಗ್ವೈಭವವನ್ನು ಪಡೆದ ಋಷಿವಾಣಿಯಲ್ಲಿ, ಶ್ರೀರಾಮ ಬಿಲ್ಲುಹಿಡಿದವರಲ್ಲಿ ಅಗ್ರಗಣ್ಯ, ಧರ್ಮಾನುಸರಣದಲ್ಲಿ ಅಗ್ರಗಣ್ಯ ಎಂಬ ಎರಡು ಭಾವಗಳು ಅಡಗಿವೆ. ಒಂದು ಭಗವದ್ವಾಣಿ, ಇನ್ನೊಂದು ಋಷಿವಾಣಿ. ಋಷಿಗಳ ವಿಷಯದಲ್ಲಿ 'ವಾಚಮರ್ಥೋನುಧಾವತಿ' ಅಲ್ಲವೆ?

ವೀರದಲ್ಲಿ ನಾಲ್ಕು ಬಗೆಗಳುಂಟು. ಅವು ದಾನವೀರ, ಧರ್ಮವೀರ, ಯುದ್ಧವೀರ, ದಯಾವೀರ. ಇವುಗಳಲ್ಲಿ ಶ್ರೀರಾಮನಿಗೆ ಅನ್ವಯಿಸುವ ವೀರ ಯಾವುದು ಎಂದು ಹೇಳೋಣ? ಆತ ಈ ನಾಲ್ಕು ಪ್ರಕಾರಗಳನ್ನೂ ತನ್ನಲ್ಲಿ ಮೂಡಿಸಿಕೊಂಡ ಕಡುಗಲಿ. ಆದ್ದರಿಂದ ಇವೆಲ್ಲವೂ ಆತನೇ. ಈ ನಾಲ್ಕೂ ರಾಮನ ಕೀರ್ತಿಭವನದ ಆಧಾರಸ್ತಂಭಗಳು.

ಭರತಖಂಡದಲ್ಲಿ, ಅದರ ಇತಿಹಾಸದಲ್ಲಿ ರಾಮಾಯಣ, ಮಹಾಭಾರತಗಳು ಗಣನೀಯ ಪ್ರಕರಣಗಳು. ಇವೆರಡನ್ನೂ ತುಲನ ಮಾಡಿದ ತಜ್ಞರು 'ಮಹಾಭಾರತ ಅಣ್ಣ ತಮ್ಮಂದಿರ ಜಗಳ. ಅದೊಂದು ಕುಟುಂಬ ಕಲಹ ಅಷ್ಟೆ. ಯುದ್ಧವೆಂದರೆ ರಾಮ ರಾವಣರ ಯುದ್ಧವೇ, ಎಂದು ಮುಕ್ತ ಕಂಠದಿಂದ ಪ್ರಶಂಸಿಸಿದ್ದಾರೆ. ಅದಕ್ಕೆ ಹೋಲಿಸಲು ಬೇರಾವ ಯುದ್ಧವೂ ಕಾಣುತ್ತಿಲ್ಲ. ಆದ್ದರಿಂದ ಅದರ ಹಿರಿಮೆ ಗರಿಮೆಗಳನ್ನು 'ರಾಮ ರಾವಣಯೋರ್ಯುದ್ಧಂ ರಾಮ ರಾವಣಯೋರಿವ' ಎಂದು ಅನನ್ವಯಾಲಂಕಾರದಿಂದ ಎತ್ತಿ ತೋರಿಸಿದ್ದಾರೆ. ಇತರರ ಹೊಗಳಿಕೆ ಹಾಗಿರಲಿ ರಾಮನ ಶರಸಂಧಾನ ವೈಖರಿಯನ್ನು ಸಾಕ್ಷಾತ್ ರಾವಣನೇ ಕೊಂಡಾಡಿದ್ದಾನೆ. ರಾವಣ ರಾಮನ ಸಮರ ನೈಪುಣ್ಯಕ್ಕೆ ಮುಗ್ಧನಾದ ಎಂದು ರಾಮಾಯಣದ ಸಾಕ್ಷ್ಯವಿದೆ. ರಘುವೀರ ಬಿಲ್ಲು ಹಿಡಿಯುವ ಒಪ್ಪ, ಹೆದೆಗೆ ಕಣೆತೊಡುವ ಓರಣ, ನಿಲ್ಲುವಭಂಗಿ (ಆಲೀಢಪಾದದಿಂದ) ಕೋಲೆಸೆವ ಒನಪು, ಆ ಕೂರಂಬಿನ ಬಿಸಿ ದಶಕಂಠನನ್ನು ಬೆರುಗುಗೊಳಿಸಿರಬೇಕು. ಆದ್ದರಿಂದ ಅವನು ಮುಗ್ಧನಾಗಿ ನೋಡುತ್ತ ಒಂದುಗಳಿಗೆ ನಿಂತಿದ್ದನಂತೆ. ಗುಣಕ್ಕೆ ಮತ್ಸರವೇ?.

ಶಿವನಿಗೆ ಕುಮಾರಸ್ವಾಮಿ, ಪರುಶುರಾಮ ಇಬ್ಬರೂ ಶಿಷ್ಯರು. ಅವರಲ್ಲಿ ಉತ್ತಮ ಧಾನುಷ್ಕ ಭಾರ್ಗವರಾಮನೇ ಎಂದು ಅವರ ನಡುವೆ ನಡೆದ ಸ್ಪರ್ಧೆಯಲ್ಲಿ ಪರಮೇಶ್ವರ ತೀರ್ಪು ಕೊಟ್ಟು ಆತನಿಗೆ (ಪರಶು) ಗಂಡುಗೊಡಲಿಯನ್ನು ಬಹುಮಾನವಾಗಿ ಕೊಟ್ಟ. ಆ ಗಂಡುಗೊಡಲಿಯಿಂದ ಜಾಮದಗ್ನಿ ಕಾರ್ತವೀರ್ಯಾರ್ಜುನನ ಸಾವಿರ ತೋಳುಗಳನ್ನು ತುಂಡರಿಸಿದ. ಕದನಕುತೂಹಲ ತೋರಿದ ಭೃಗುನಂದನನ ಗರ್ವಭಂಗ ಮಾಡಿ ವೀರ ರಘುವೀರ, ಶೈವ ವೈಷ್ಣವ ಧನುಸ್ಸುಗಳೆರಡನ್ನೂ ಭಂಜಿಸಿದ.

ಪೌಲಸ್ತ್ಯನನ್ನು ಅವಲೀಲೆಯಾಗಿ ಗೆದ್ದ ಬಲಶಾಲಿ ವಾಲಿ. ಆ ವಾಲಿಯನ್ನು ಏಕ ಬಾಣದಿಂದ ರಾಮನು ಸಂಹರಿಸಿದ ಸನ್ನಿವೇಶ ರಾಮಾಯಣದಲ್ಲಿದೆ. ಸುಗ್ರೀವನ ನಂಬಿಕೆಗಾಗಿ ಏಳು ತಾಳೆ ಮರಗಳನ್ನು ಬೀಳಿಸಿದ. ಸುಗ್ರೀವ 'ವಾಯುನಂದನಾ! ನೀನು ರಾಮನ ಮಹಿಮೆಯನ್ನು ಚೆನ್ನಾಗಿ ಬಲ್ಲವನು. ಆದ್ದರಿಂದಲೇ ನಿನಗೆ ಪ್ರಥಮ ದರ್ಶನದಲ್ಲೇ ಆ ಮಹಾ ವೀರನಲ್ಲಿ ಭಕ್ತಿ ಮೂಡಿತು. ನಾನದನ್ನು ಹಾಗೆ ತಿಳಿಯಲಾರದೆ ಹೋದೆ' ಎಂದು ಪಶ್ಚಾತ್ತಾಪ ಪಟ್ಟನಂತೆ. ಕೋದಂಡ ಪಾಣಿಯ ಚಾಪ ವಿದ್ಯಾ ನಿಪುಣತೆಗೆ ಮತ್ತೊಂದು ಸ್ಪಷ್ಟವಾದ ನಿದರ್ಶನ ಉಂಟು. ಖರದೂಷಣರನ್ನು ಪುಣ್ಯ ಜನಸ್ಥಾನದಲ್ಲಿ ಅವರ ಹದಿನಾಲ್ಕು ಸಾವಿರ ಕಂಚುರಥಗಳೊಡನೆ ಹುಟ್ಟಡಗಿಸಿದ. ರಾಮ ಅವರನ್ನು ಏಕೈಕ ವೀರನಾಗಿ ಕೊಂದ.

ಇನ್ನು ಶ್ರೀರಾಮನಿಗೆ ವೀರತಿಲಕವಿಡಿಸಿದ್ದು ರಾವಣವಧೆ. ರಾವಣ ಸಾಮಾನ್ಯನಲ್ಲ. ಅತುಲ ಪರಾಕ್ರಮಿ. ಅವನನ್ನು ಬಗ್ಗಿಸುವುದು ರಾಮನಿಗೂ ಅಷ್ಟು ಸುಲಭವಾಗಿ ತೋರಲಿಲ್ಲ. ಯೋಚನೆಗಿಟ್ಟುಕೊಂಡಿತು. ಆಗ ಅಗಸ್ತ್ಯರು ಬಂದು 'ಆದಿತ್ಯಹೃದಯ' ದಿವ್ಯಮಂತ್ರವನ್ನು ಉಪದೇಶಿಸಿದರು. ಶ್ರೀರಾಮ ನವಚೈತನ್ಯ ತುಂಬಿ ಕೊಂಡು ಬ್ರಹ್ಮಾಸ್ತ್ರದಿಂದ ದಶಕಂಧರನ ಹೃದಯದ ಅಮೃತ ಕಲಶವನ್ನು ಭೇದಿಸಿ ರಾವಣಾಂತಕ

**ಶ್ರೀ ಕಾರುಪಲ್ಲಿ ಜಾನಕಿರಾಮಯ್ಯ**
**ಎಂ.ಎ.**

ನೆನಿಸಿದ. ಇನ್ನು ಸಾಗರಗರ್ವಭಂಗ ಪ್ರಕರಣದಲ್ಲಿ ರಾಮನ ಶೌರ್ಯ ಕಡಲಿನ ಉಕ್ಕಿನಂತೆ ಹರಿತು. ದಾಶರಥಿ ಒಂದೇಶರದಿಂದ ಅದರ ಸೊಕ್ಕಡಗಿಸಿದ. ಇದನ್ನು ಒಬ್ಬ ಕವಿ 'ಶತ್ರು ದಶಗ್ರೀವ, ಕಾಲಿನಿಂದ ಕಡಲನ್ನು ದಾಟ ಬೇಕು; ಯುದ್ಧದಲ್ಲಿ ಸಹಾಯವೋ ಕಪಿಗಳು, ಆದರೂ ಆತ ಸಕಲ ರಾಕ್ಷಸ ಕುಲವನ್ನೂ ಸದೆ ಬಡಿದ' ಎಂದು ಹೊಗಳಿದ್ದಾನೆ. ಇದು ಮಹಾ ವೀರನ ವೀರ ಶ್ರೀ ವೈಭವ. ಇನ್ನು ಕಾಕಾಸುರನನ್ನು ಶಿಕ್ಷಿಸುವಾಗ ತೃಣವೇ ಕಣೆ.

ರಾಮಾಯಣದಲ್ಲಿ ರಾಮನ ಶೌರ್ಯವನ್ನು 'ಧೃತಿ ಪ್ರವಾಳಃ ಪ್ರಸಹಾಗ್ರಪುಷ್ಪಃ ತಪೋಬಲಂ ಶೌರ್ಯನಿಬದ್ಧಮೂಲಃ ರಣೇ ಮಹಾನ್ ರಾಕ್ಷಸ ರಾಜವೃಕ್ಷಃ ಸಮ್ಮರ್ದಿತೋ ರಾಘವ ಮಾರುಹತೇನ' ಎಂದು ವಾಲ್ಮೀಕಿ ಚಿತ್ರಿಸಿದ್ದಾರೆ.

ಶ್ರೀರಾಮನಲ್ಲಿ ಇಂಥಾ ಶೌರ್ಯರೇಖೆಯನ್ನು ಬೆಳೆಸಿದ ಯಶಸ್ಸು ವಿಶ್ವಾಮಿತ್ರ ಋಷಿಗೆ ಸಲ್ಲುತ್ತದೆ. ರಾಮಾಯಣದಲ್ಲಿ ಬಹುಭಾಗ ವಿಶ್ವಾಮಿತ್ರ ಆಕ್ರಮಿಸಿದ್ದಾನೆ. ಅದು ರಾಮನ ವಿದ್ಯಾಭ್ಯಾಸದ ಕಾಲ. ರಾಮಲಕ್ಷ್ಮಣರಲ್ಲಿ ಹುದುಗಿದ್ದ ಶಕ್ತಿ ಸಾಮರ್ಥ್ಯ ಪ್ರಜ್ಞಾಪಾಟವಗಳನ್ನು ಪ್ರಚೋದಿಸಿ, ಅವು ವಿಕಾಸಗೊಳ್ಳುವಂತೆ ಉತ್ತಮ ವಾತಾವರಣವನ್ನು ಒದಗಿಸಿದ ಕೌಶಿಕ ಉತ್ತಮಗುರುವಲ್ಲವೇ? ಶ್ರೀರಾಮ ಉತ್ತಮ ಕ್ಷತ್ರಿಯ ಸಂಜಾತ ಹೌದು. ಇದು ಜನ್ಮದ ದೃಷ್ಟಿಯಿಂದ. ಆದರೆ ಜೀವ ಸಂಸ್ಕಾರ ದೃಷ್ಟಿಯಿಂದ ಆತ ಕೌಶಿಕ ಕರಕಮಲ ಸಂಜಾತ. ರಾಮನಲ್ಲಿ ಅಭಿವ್ಯಕ್ತಿಗೊಂಡ ಧರ್ಮ ಪ್ರಜ್ಞೆಗೆ ಋಷಿ ಸೇವೆಯೇ ಕಾರಣ. ಮಾರೀಚನನ್ನು ವಾಯವ್ಯಾಸ್ತ್ರದಿಂದ ಬಲು ದೂರಕ್ಕೆ - ದಕ್ಷಿಣಸಾಗರಕ್ಕೆ - ಸೇರಿಸಿ, ಸುಬಾಹುವನ್ನು ಕೌಶಿಕರ ಯಜ್ಞಶಾಲೆಯಲ್ಲೇ ಆಗ್ನೇಯಾಸ್ತ್ರಕ್ಕೆ ಆಹುತಿ ಕೊಟ್ಟ ಬಾಲರಾಮನ ಪರಾಕ್ರಮಕ್ಕೆ ಋಷಿವರ್ಯನೂ ಸೋಜಿಗಪಟ್ಟ. ಜೃಂಭಕಾಸ್ತ್ರಗಳಪ್ರದಾನವೂ ಋಷಿಯಿಂದಾಯಿತು ರಾಮನಿಗೆ 'ದೂರಪಾತೀಜ ರಾಘವಃ' ಎಂಬ ಪ್ರಶಸ್ತಿಯೂ ಸಂದಿತು.

ಶ್ರೀರಾಮನ ಶೌರ್ಯ ಪ್ರಶಂಸೆ ಬರಿ ಕಾವ್ಯವಸ್ತುವಾಗಿಯೇ ಅಲ್ಲ, ಶಾಸ್ತ್ರಜ್ಞರೂ ಆತನ ಪರಾಕ್ರಮವನ್ನು ಎತ್ತಿ ಅಭಿವರ್ಣಿಸಿದ್ದಾರೆ. ಪಾವುಲೂರಿ ಮಲ್ಲಿನ ಎಂಬ ಗಣಿತ ಶಾಸ್ತ್ರಜ್ಞ ಭಿನ್ನರಾಶಿ ಪ್ರಕರಣದಲ್ಲಿ ಒಂದು ಸಮಸ್ಯೆ ಕೊಟ್ಟಿದ್ದಾನೆ. ಅದರ ವಿಷಯ ರಾಮನ ಪರಾಕ್ರಮ. ಸಾಗರ ತೀರದಲ್ಲಿ ಬೀಡು ಬಿಟ್ಟಿದ್ದ ರಾಮನ ಸೈನ್ಯವನ್ನು ನೋಡಲು ರಾವಣ ತನ್ನ ಅರಮನೆಯುಲ್ಲಿ ಪರಿವಾರ ದೊಡನೆ ಬಂದು ಉಪ್ಪರಿಗೆಮೇಲೆ ನಿಂತ. ಅವನ ವೈಭವವನ್ನು ವೈರಿದಳಕ್ಕೆ ತೋರಿಸಲು ಸೇವಕರು ಅವನಿಗೆ ತುಂಬ ಬೆಳ್ಗೊಡೆಗಳನ್ನು ಹಿಡಿದರಂತೆ ರಾಮ ಅವನ ಅಟ್ಟಹಾಸವನ್ನು ಮುರಿಯಲು ಶರಪ್ರಯೋಗ ಮಾಡಿದ. ಅದರವೇಗಕ್ಕೆ ತಾಳಲಾರದೆ ಅವುಗಳಲ್ಲಿ 1/3 ಭಾಗ ಸಮುದ್ರದಲ್ಲಿ ಬಿತ್ತು. 1/4 ಭಾಗ ಬೆಟ್ಟಗಳ ಮೇ" ಬಿತ್ತು 1/6 ಭಾಗ ವಾನರರ ಮೇಲೆ ಬಿತ್ತು. 1/8 ಭಾಗ ರಾಕ್ಷಸರತಲೆಗಳ ಮೇಲೆ ಬಿತ್ತು. 1/9 ಭಾಗ ರಾವಣನ ಅರಮನೆ ಮೇಲೆರಗಿತು. ಆದರೆ ಕೊನೆಯ ಎರಡು ಅಲ್ಲೇ ಮುರಿದು ಬಿದ್ದವು. ಅಂದರೆ ರಾವಣನಿಗೆ ಹಿಡಿದ ಬೆಳ್ಗೊಡೆಗಳ ಸಂಖ್ಯೆ ಎಷ್ಟು ಎಂದು.

ಉಪಮಾಲಂಕಾರ ನಿರೂಪಣೆಯಲ್ಲಿ ವ್ಯಾಸ ಪೀಠ ವೆನಿಸಿದ ಆದಿಕವಿ ವಾಲ್ಮೀಕಿ ರಾಮ ಬಾಣನೈಶಿತ್ಯವನ್ನು ಮೂರು ಕ… ಸುಂದರವಾಗಿ ಚಿತ್ರಿಸಿದ್ದಾರೆ. ಖರದೂಷಣ ತ್ರಿಶಿರರ ಮೇಲೆ ಪ್ರಯೋಗಮಾಡಿದಾಗ ಅದು ಅವರ ಪ್ರಾಣವಾಯುಗಳನ್ನು ಸಳೆದಾಗ ಹಾವಿನಂತಿತ್ತು – ಶರೈಃ 'ಆಶೀವಿಷೋಪಮೈಃ' ಎಂದೂ, ಸಮುದ್ರಜಲವನ್ನು ಶೋಷಿಸುವಾಗ ಸೂರ್ಯನಂತೆ ಇತ್ತು – 'ಶರೈಃ ಆದಿತ್ಯ ಸನ್ನಿಭೈಃ' ಎಂದೂ, ಸಪ್ತತಾಳಗಳನ್ನು ಛೇದಿಸುವಾಗ ಬೆಂಕಿಯಂತಿತ್ತು – 'ಶರೈಃ ಅಗ್ನಿ ಶಿಖೋಪಮೈಃ' – ಎಂದು ಚಿತ್ರಿಸಿದ್ದಾರೆ. ಈ ಉಪಮಾನಾಚಿತ್ಯವನ್ನು ಎಷ್ಟು ಕೊಂಡಾಡಿದರೂ ಸಾಲದು. ತ್ಯಾಗರಾಜರು ರಾಮಬಾಣತ್ರಾಣಶೌರ್ಯವನ್ನು ತಮ್ಮ ಕೀರ್ತನೆ ಒಂದರಲ್ಲಿ ಹೊಗಳಿದ್ದಾರೆ.

ಶ್ರೀರಾಮನು ಎಷ್ಟು ಪರಾಕ್ರಮಿಯೋ ಮೇಲಿನ ಉದಾಹಣೆರಗಳು ಸಾರುತ್ತಿವೆ. ಇನ್ನೊಂದು ಗುಮನಾರ್ಹವಾದ ಉದಾಹರಣೆ. ಪರಮ ವೈ ರಾ ಗ್ಯ ಶಿ ರೋ ಮ ಣಿ, ಪ್ರಶಾಂತ ಸ್ವಾಂತ ಸಂಪನ್ನರೂ ಆದ ಶ್ರೀ ಆದಿ ಶಂಕರರೂ ಸ್ತೋತ್ರ ಸಾಹಿತ್ಯ ರಚನೆಯಲ್ಲಿ 'ರಾಮಸ್ತವ'ವನ್ನು ಬರೆಯುತ್ತ ರಾಮನ ವೀರಮಾನವನ್ನು ಮುಕ್ತ ಕಂಠದಿಂದ ಸ್ತುತಿಸಿದ್ದಾರೆ' "ಯದಾ ಮತ್ಸಮೀಪಂ ಕೃತಾಂತಃ ಸಮೇತ್ಯ ಪ್ರಚಂಡ ಪ್ರಕೋಪೈರ್ಭಟೈರ್ಭಿಷಯೇನ್ಮಾಂ, ಸದಾ ವಿಷ್ಕರೋಷಿ ತ್ವದೀಯಂ ಸ್ವರೂಪಂ ಸದಾ ಸತ್…ಣಾಶಂ ಸಕೋದಂಡ ಬಾಣಂ" ಶ್ರೀ ರಾಮಚಂದ್ರಾ! ಯಮ ನನ್ನನ್ನು ಸಮೀಪಿಸಿ ಪ್ರಚಂಡ ಕೋಪವುಳ್ಳ ತನ್ನ ಭಟರಿಂದ ಹೆದರಿಸುವಾಗ, ನೀನು ಕೋದಂಡಪಾಣಿಯಾಗಿ ನಿನ್ನ ಸ್ವರೂಪವನ್ನು ತೋರಿಸುತ್ತ ಪ್ರತ್ಯಕ್ಷವಾಗಿ ವಿಪತ್ತನ್ನು ನಾಶಗೊಳಿಸು. ಇದನ್ನೇ ವಾಲ್ಮೀಕಿ 'ಕೋವೇಯಮಃ' ಎಂದು ಸೂಚಿಸಿದ್ದಾರೆ. ರಾಮಾವತಾರದ ಶೌರ್ಯದ ನೆನಪು ಕೃಷ್ಣಾವತಾರಕ್ಕೂ ಸಂಕ್ರಮಿಸಿತು. ತಾಯಿ ಹೇಳಿದ ಕಥಾಪ್ರಸಂಗದಲ್ಲಿ ಸೀತಾಪಹರಣ ಘಟ್ಟಬಂದಾಗ 'ಲಕ್ಷ್ಮಣಾ! ಎಲ್ಲಿ? ನನ್ನ ಧನಸ್ಸೆಲ್ಲಿ?' ಎಂದ ಸಂದರ್ಭವನ್ನು ಲೀಲಾಶುಕರು ಶ್ರೀ ಕೃಷ್ಣಕರ್ಣಾಮೃತದಲ್ಲಿ ಸುಂದರವಾಗಿ ಚಿತ್ರಿಸಿದ್ದಾರೆ.

ಶ್ರೀರಾಮ ಸತ್ಯ ಪರಾಕ್ರಮ. ಆತನ ಸಮರ ಪರಾಕ್ರಮವನ್ನು ಮೀರಿಸಿದ್ದು. ಧರ್ಮಾನುಸರಣೆಯಲ್ಲಿ, ಧರ್ಮ ಶ್ರದ್ಧೆಯಲ್ಲಿ ಅಚಲವಾದ, ಅನವರತವಾದ ನಿಷ್ಠೆ ರಾಮನನ್ನು ಆದರ್ಶ ಪುರುಷನನ್ನಾಗಿ ಮಾಡಿದೆ. ಆತನಿಗೆ ಧರ್ಮಾಚರಣೆಯಲ್ಲಿ ಯಾವ ವಿನಾಯಿತಿಯೂ ಇಲ್ಲ. ಅಕ್ಷರಶಃ ಧರ್ಮವನ್ನು ಪಾಲಿಸಲೇ ಬೇಕು. ತ್ಯಾಗಯ್ಯನವರು ರಾಮನ ವಿಶಿಷ್ಟಗುಣಗಳನ್ನು ಸಂಗ್ರಹವಾಗಿ 'ತಾಮಸಾದಿ ಗುಣ ರಹಿತುಡು, ಧರ್ಮಾತ್ಮುಡು, ಸರ್ವಸಮುಡು' ಎಂದಿದ್ದಾರೆ. ಸತ್ಯ, ಧರ್ಮ ಇವು ಬೇರೆಯಲ್ಲ. 'ಧರ್ಮಸ್ತುಕಃ'? ಎಂಬ ಪ್ರಶ್ನೆಗೆ "ಸತ್ಯೋಕ್ತಿಃ" ಎಂದು ಶ್ರೀರಾಮಾನುಜರು ವಕ್ಕಾಣಿಸಿದ್ದಾರೆ. ಧರ್ಮ, ಸತ್ಯ ಎಂಬ ಎರಡು ದಡಗಳ ನಡುವೆ ಶ್ರೀರಾಮನ ಬಾಳನದಿ ಹರಿದಿದೆ.

ಹಿಂದಿನರಾತ್ರಿ 'ನಾಳೆ ನಿನಗೆ ಪಟ್ಟ ಕಟ್ಟುತ್ತೇನೆ' ಎಂದು ಹೇಳಿದಾಗ ರಾಮ ಪ್ರಸನ್ನ ರಾಘವನಾಗಿ ಹಿಗ್ಗಲಿಲ್ಲ, 'ಪಟ್ಟಾಭಿಷೇಕ ಇಲ್ಲ,' ಎಂದು ತಿಳಿಸಿದಾಗ ಆತ ಪಟ್ಟ ಭಂಗ ರಾಘವನಾಗಿ ಕುಗ್ಗಲಿಲ್ಲ. ಆತ ಸ್ಥಿತ ಪ್ರಜ್ಞ. ಲಕ್ಷ್ಮಣ 'ನಿನಗೆ ಈ ಕಷ್ಟ ಕೊಟ್ಟವರನ್ನು ತೀರಿಸಿ ಬಿಡುತ್ತೇನೆ,' ಎಂದಾಗ ಹುಚ್ಚ! ನೀನು ಯಾರನ್ನು ಕೊಲ್ಲುವುದು? ರಾಜ್ಯದ ಅಧಿಕಾರಿಣಿ ಮಧ್ಯಮಾಂಬೆ ಕೈಕೆ. ತಂದೆ ಆಕೆಗೆ ಮದುವೆಯಂದೇ ಅದನ್ನು ಧಾರೆಯೆರೆದು ಕೊಟ್ಟಿದ್ದಾರೆ. ಆದ್ದರಿಂದ ರಾಜ್ಯವನ್ನು ಯಾರಿಗೆ ಬೇಕಾದರೂ ಕೊಡುವ ಹಕ್ಕು ಆಕೆಗುಂಟು. ನಾವು ಅದಕ್ಕಾಗಿ ಪರದಾಡಿದರೆ ಅಧರ್ಮಿಗಳೂ ಅಸತ್ಯವಂತರೂ ಆಗುತ್ತೇವೆ. ತಂದೆ ನನಗೆ ವಿಧಿಸಿರುವುದು ವನವಾಸ. ಅದನ್ನು ಚಾಚೂತಪ್ಪದೆ ಪಾಲಿಸುವುದು ನನ್ನ ಧರ್ಮ. ತಾಯಿ ಭರತನಿಗೆ ಹೇಳಿರುವುದು ರಾಜ್ಯ ಆಳು ಎಂದು. ಅದನ್ನು ಅವನು ಪಾಲಿಸಬೇಕು. ಇಲ್ಲದಿದ್ದರೆ ರಾಜ್ಯದ ಪ್ರಜೆಗಳ ದೃಷ್ಟಿಯಲ್ಲಿ ನಾವು ಧರ್ಮ ಬಾಹಿರರಾಗುತ್ತೇವೆ" ಎಂದ ರಾಮನ ಧರ್ಮ ಪ್ರಜ್ಞೆ ಋಷಿಗಳಿಗೇ ಮಾನ್ಯವೆಂದಮೇಲೆ ಯಾರಿಗೆ ಮಾನ್ಯವಲ್ಲ?.

ರಾಮನಲ್ಲಿ ವಿಶಿಷ್ಟ ಗುಣವೆಂದರೆ ವಿನಯ. ಆಗಸ್ತ್ಯಾಶ್ರಮದಲ್ಲಿ ಅವರ ದರ್ಶನಕ್ಕೆಂದು ಹೋದಾಗ, ಅವರಿಗೆ ಪಾದಾಭಿವಂದನೆಮಾಡಿ ಕೈಕಟ್ಟಿನಿಂತು 'ಕ್ಷತ್ರಿಯಾ ವೃತ್ತ ಸಂಪನ್ನಾ' ಎಂದು ಬಿನ್ನವಿಸಿಕೊಂಡ. ಸೀತಾಪತಿಯ ವಿನಯದ ಬಗ್ಗೆ ಒಂದು ಸೊಗಸಾದ ಸನ್ನಿವೇಶವೆಂದರೆ ಇದು. ರಾವಣನ ವಧಾನಂತರ ಅಯೋಧ್ಯೆಗೆ ಹಿಂದಿರುಗುವಾಗ ಅಗಸ್ತ್ಯಾಶ್ರಮದಲ್ಲಿ ಒಂದೆರಡು ಗಳಿಗೆ ನಿಂತರು. ಅಗಸ್ತ್ಯರು ಲಂಕಾ ವಿಜಯ ವೃತ್ತಾಂತವನ್ನು ತಿಳಿಸ ಬೇಕೆಂದು ಮೈಥಿಲಿಯನ್ನು ಕೇಳಿದರು. ಆಗ ಶ್ರೀರಾಮ ಚಂದ್ರ ಸೀತೆಯನ್ನು ಪಕ್ಕಕ್ಕೆ ಕರೆದು, "ನೋಡು, ನೀನು ನನ್ನ ಪರಾಕ್ರಮದ ಬಗ್ಗೆ ಏನು ಬೇಕಾದರೂ ಹೇಳು, ಆದರೆ ಸಾಗರ ಗರ್ವಭಂಗದ ವೃತ್ತಾಂತಮಾತ್ರ ಹೇಳಬೇಡ ಜೋಕೆ" ಎಂದು ಎಚ್ಚರಿಸಿದ. ಆಕೆ 'ಓಹೊ! ಏಕೆ? ಅದು ಸುಳ್ಳೇ' ಎಂದಳು. ಅದಕ್ಕೆ ರಾಮ 'ಹಾಗಲ್ಲ. ಸಪ್ತಸಾಗರಗಳನ್ನು ಏಕಾಪೋಶನ ತೆಗೆದುಗೊಂಡ ಆ ಮಹಾಮಹಿಮನ ಮುಂದೆ ನಮ್ಮದೇನು? ಹನುಮಂತನ ಮುಂದೆ ಹಾರಾಟವೇ' ಎಂದ. ಹನುಮಂತ ಪಕ್ಕದಲ್ಲೇ ಇದ್ದ. ಆತ ಕಿರುನಗೆ ತೋರಿ ತಲೆ ಬಗ್ಗಿಸಿಕೊಂಡನಂತೆ. ಅಹಲ್ಯಾಶಾಪ ವಿಮೋಚನವಾಯಿತು. ಆಕೆ ಭಕ್ತಿ ಕೃತಜ್ಞತೆಗಳಿಂದ ರಾಮನ ಕಾಲಿಗೆ ನಮಸ್ಕಾರ ಮಾಡಿದಳು. ರಾಮನಿಗೆ ತುಂಬ ಸಂಕೋಚವಾಯಿತು. ಒಡನೆಯೇ ತನ್ನ ನೈಜ ವಿನಯದಿಂದ ಆಕೆಯ ಪಾದಗಳಿಗೆ ರಾಮ ನಮಸ್ಕರಿಸಿದ. ಆಕೆ ಈಗ ಪರಿಶುದ್ಧಳು. ಋಷಿಪತ್ನಿ ತನಗಿಂತ ಹಿರಿಯಳು. ವಿಶ್ವಾಮಿತ್ರರ ಶಿಫಾರಸು ಬೇರೆ, ಅಂದ ಮೇಲೆ ಆ ಪೂಜ್ಯಳಿಗೆ ಗೌರವ ಸಲ್ಲಿಸಬೇಡವೇ?

ಕೌಸಲ್ಯಾನಂದವರ್ಧನನಿಗೆ ಕುಲದ ಹಿರಿಮೆಯನ್ನು ಕಾಪಾಡಿಕೊಳ್ಳುವುದರಲ್ಲಿ ಬಲು ಶ್ರದ್ಧೆ. ತನ್ನ ಹಿರಿಯರ ಆದರ್ಶ ಜೀವನವನ್ನು ನೆನೆಸಿಕೊಂಡರೆ ಆತನಲ್ಲಿ ಹೆಮ್ಮೆ ಭಯ ಎರಡೂ ಮೂಡುತ್ತಿದ್ದುವು. ಎಲ್ಲಿ ತಪ್ಪು ಹೆಜ್ಜೆ ಇಡುತ್ತೇನೋ ಎಂದು ಹೆದರಿಕೆ. ತಂದೆಯ ಸತ್ಯಸಂಧತೆಯನ್ನು ಕಾಪಾಡಬೇಕೆಂದೇ ಕಾನನವಾಸ ಕೈಗೊಂಡ. ತಮ್ಮ ಹಿರಿಯರು ಪ್ರಜಾರಂಜಕರು. ತನ್ನಿಂದ ಅದಕ್ಕೆ ಎಂದೂ ಚ್ಯುತಿ ಒದಗ ಬಾರದು. ಅದಕ್ಕಾಗಿ ಪತ್ನಿಯನ್ನೂ ತ್ಯಜಿಸಲೂ ಸಿದ್ಧ. ನಿರ್ವಾಸಿತಳಾದರೂ ಆಕೆ ರಾಮನ ಆ ಧರ್ಮನಿರತಿಯನ್ನು ಮೆಚ್ಚಿಕೊಂಡಳು. 'ಅತಯೇವ ಆರ್ಯ ಕುಲ ದುರಂಧರ ಆರ್ಯ ಪುತ್ರಃ' ಎಂದು ಹೊಗಳಿದಳು



ಶರಣಾಗತ ರಕ್ಷಣೆಯಲ್ಲಿ ಶ್ರೀರಾಮನಿಗೇ ಅಗ್ರಪೂಜೆ. 'ರಾಮಾಯಣದಲ್ಲಿ ಅರಣ್ಯ ಕಾಂಡವೆಲ್ಲ ಒಂದು ಅಭಯ ಪ್ರದಾನ ಮಾಲಿಕೆ' ಎಂದಿದ್ದಾರೆ ಒಬ್ಬ ವಿಮರ್ಶಕರು. ರಾಮನಲ್ಲಿ ಎದ್ದು ಕಾಣುವ ಗುಣ ಮಾನವೀಯತೆ. ಇದರಲ್ಲಿ ಇವರು ಅವರು ಎಂಬ ಭೇದವಿಲ್ಲ. ಈ ಗುಣ ಮಾನವರಿಗೇ ಅಲ್ಲದೆ ತಿರ್ಯಗ್ಜಂತುಗಳಿಗೆ, ಕಲ್ಲುಗಳಿಗೆ ವ್ಯಾಪಿಸಿತ್ತು. ಗುಹ, ಶಬರಿ, ಅಹಲ್ಯೆ, ಜಟಾಯು, ಸುಗ್ರೀವ ಎಲ್ಲರೂ ಈ ಅಭಯ ಪ್ರದಾನದ ಸವಿಸಂರಕ್ಷಣೆಗಳನ್ನು ಕಂಡವರು, 'ಅಭಯಂ ಸರ್ವ ಭೂತೇಭ್ಯೋ ದದಾಮ್ಯೇತದ್ವ್ರತಂ ಮಮ' 'ಸಮಯ ಬಂದಾಗ ನಾನು ಅಯೋಧ್ಯೆಯನ್ನೂ ಬಿಟ್ಟುಕೊಟ್ಟು ಕಾಡಿನಲ್ಲಿಯೇ ಇರಲೂ ಸಿದ್ಧ'ಎಂದಿದ್ದಾನೆ ರಾಮ. ಅದಕ್ಕೇ ರಾಮಾಯಣದಲ್ಲಿ ಮಾನವತ್ವ, ದೇವತ್ವ ಒಂದಕ್ಕೊಂದು ಹಾಸುಹೊಕ್ಕಾಗಿ ಹೆಣೆದುಕೊಂಡಿವೆ. ರಾಮನ ಕಥೆ ಲೌಕಿಕ ಜಗತ್ತಿಗೂ, ಪಾರಲೌಕಿಕ ಜಗತ್ತಿಗೂ ಸಂಗಮ ಸ್ಥಾನ. ಆದರೆ ರಾಮನು ಎಲ್ಲೂ ತಾನು ದೇವರು ಎಂದು ಹೇಳಿಕೊಳ್ಳಲಿಲ್ಲ. 'ಆತ್ಮಾನಂ ಮಾನುಷಂ ಮನ್ಯೇ' ಎಂದೇ ಹೇಳಿದ. ಆದರೂ ಆತನನ್ನು ಅರಿತುಕೊಂಡವರು ವಶಿಷ್ಠರು, ವಿಶ್ವಾಮಿತ್ರರು, ಮಾರೀಚ, ಮಾಲ್ಯವಂತ, ಆಶ್ರಮವಾಸಿಗಳಾದ ಋಷಿಗಳು. ಸಮಯ ಬಂದಾಗ ಇವರೆಲ್ಲರೂ ರಾಮನ ಅವತಾರ ವೃತ್ತಾಂತವನ್ನು ಹೊರಗೆಡವಿದರು.

ಗೃಹಸ್ಥ ಧರ್ಮದಲ್ಲೂ ರಾಮನಿಗೆ ದೊಡ್ಡ ಮಣೆ ಹಾಕಬೇಕು. ಒಮ್ಮೆ ತಂದೆ ಹೋದ ದುಃಖವನ್ನೂ, ರಾಜ್ಯಹೋದುದನ್ನೂ ಸಹಿಸಬಲ್ಲೆ. ಆದರೆ ನನ್ನ ಪತ್ನಿಯನ್ನು ಇತರರು ಸ್ಪರ್ಶಿಸುವುದನ್ನು ಮಾತ್ರ ಎಂದೆಂದಿಗೂ ಸಹಿಸಲಾರೆ ಎಂದಿದ್ದಾನೆ. 'ಸ್ವರ್ಗೋಪಿ ಸೀತಯಾ ಹೀನಃ ಶೂನ್ಯ ಏವ ಮತೋ ಮಮ' ಎಂದೂ 'ಸೀತಯಾರಹಿತೋಹಂ ವೈ ನಹಿ ಜೀವಾಮಿ ಲಕ್ಷ್ಮಣ' ಎಂದೂ, ರಾಮನೇ ಹೇಳಿದ್ದಾನೆ.

ಶರಣಾಗತಿ ಭಾವಕ್ಕೆ 'ನ್ಯಾಸ ವಿದ್ಯೆ' ಎಂಬ ಹೆಸರುಂಟು ಎಂದು ಶರಣಾಗತಿ ಗದ್ಯದಲ್ಲಿ ಶ್ರೀಭಗವದ್ರಾಮಾನುಜರು ಉಲ್ಲೇಖಿಸಿದ್ದಾರೆ. 'ನ್ಯಾಸ' ಎಂದರೆ ಭಗವಂತನಲ್ಲಿ ಆತ್ಮಾರ್ಪಣೆ ಮಾಡುವುದು. ಇದೇ ತಪಸ್ಸಿಗಿಂತ, ಜ್ಞಾನಕ್ಕಿಂತ ಹಿರಿದು ಎಂದಿದ್ದಾರೆ. 'ರಾಮನನ್ನು ಅರ್ಥಮಾಡಿಕೊಳ್ಳ ಬಯಸುವವರು ಮೊದಲು ಸೀತೆಯ ಹಿರಿಮೆಯನ್ನು ತಿಳಿದುಕೊಳ್ಳಬೇಕು'ಎಂದು ಒಬ್ಬ ವಿಮರ್ಶಕರು ಸೂಚಿಸಿದ್ದಾರೆ.

ಶ್ರೀರಾಮಚಂದ್ರನ ರೂಪ ಜಗನ್ಮೋಹಕ. 'ರಾಮೋ ವಿಗ್ರಹವಾನ್ ಧರ್ಮಃ' ಹೌದು. ನಿಜ – ಆದರೆ 'ಪುಂಸಾಂ ಮೋಹನರೂಪಾಯ' ಎಂಬುದೂ ಅಷ್ಟೇ ನಿಜ. 'ನೀಲಶ್ಯಾಮಲಕೋಮಲಾ ರುಚಿತೋ ನಿಂಡಾರು ಶೀತಾಂಶು ನಿನ್ ಸಾರುನ್ ಪೋಲೆಡು ಮೋಮುತೋ – ನವಸುಧಲ್ ವರ್ಷಿಂಚು ಲೇನವ್ವುತೋ' ಎಂದು ಒಬ್ಬ ತೆಲುಗು ಕವಿ ಭಾವಾವೇಶದಿಂದ ಹಾಡಿದ್ದಾರೆ. ಆದ್ದರಿಂದಲೇ ಋಷಿಗಳೂ ಈ ಮನಮೋಹಕ ಮೂರ್ತಿಯ ಸುಖಾಲಿಂಗನವನ್ನು ಬಯಸಿದರು. ಹನುಮಂತನು ಮೊತ್ತಮೊದಲಿಗೆ ರಾಮ ಲಕ್ಷ್ಮಣರನ್ನು ಕಂಡಾಗ 'ಸರ್ವ ಭೂಷಣ ಭೂಷಾರ್ಹಾ ಕಿಮರ್ಥಂ ನವಿ ಭೂಷಿತಾಃ' ಎಂದು ಆಶ್ಚರ್ಯಪಟ್ಟ. ರೂಪಕ್ಕೆ ಒಪ್ಪವಿಡುವ ರಾಮನ ಗುಣರಾಶಿ, ಸ್ಮಿತಪೂರ್ವ ಮಿತಭಾಷಿತ್ವ ರಾಮನ ಬಿಲ್ಲು 'ಕ್ಷತ್ರಿಯೈರ್ಧಾರ್ಯತೇ ಚಾಪಂ ನಾರ್ತಶಬ್ದೋ ಭವೇದಿತಿ' ಎಂಬ ತತ್ತ್ವಕ್ಕೆ ಉದಾಹರಣೆ. ರಾಮನ ಶೌರ್ಯದ ಬಿಸಿ ಬಲ್ಲವರು ರಾವಣ, ವಾಲಿ, ಖರದೂಷಣರು. ಅಭಯದ ರುಚಿಯನ್ನು ಕಂಡವರು ಸುಗ್ರೀವ, ವಿಭೀಷಣ. ಕಾರುಣ್ಯದ ಹಿರಿಮೆಯನ್ನು ಬಲ್ಲವರು ಶಬರಿ, ಜಟಾಯು, ಗುಹ, ಅಹಲ್ಯೆ. ಸೌಂದರ್ಯದ ಮೋಜವನ್ನು ಬಲ್ಲವರು ವೈದೇಹಿ, ಋಷಿಗಳು. ತತ್ತ್ವವನ್ನು ಬಲ್ಲವರು ಅಗಸ್ತ್ಯ, ಅತ್ರಿ ಭರದ್ವಾಜಾದಿಗಳು. ವಾಯುಪುತ್ರ ಹನುಮ, ವಾಲ್ಮೀಕಿ, ಕೌಶಿಕರು. ತ್ಯಾಗರಾಜರು 'ಲಾವಣ್ಯರಾಮುನ ರೂಪಶೀಖಾ ವಿಲಾಸಗಳನ್ನು ಕಣ್ಣುಂಬ ನೋಡಿ' ಎಂದು ಸಾರಿದ್ದಾರೆ. ಹೀಗೆ ಕಣ್ಣುಂಬ ನೋಡಿ ನಲಿದವರೆಂದರೆ ವಿಶ್ವಾಮಿತ್ರರು.

ತನ್ನೊಡನೆ ಬಂದ ರಾಮ ಲಕ್ಷ್ಮಣರು ಬೆಳಗಿನ ಜಾವ ಕಾಡು ದಾರಿಯಲ್ಲಿ ಉತ್ಸಾಹದಿಂದ ನಡೆದು ಹೋಗುತ್ತಿರುವಾಗ ಎಳೆಗಾಳಿಗೆ ಮುದ್ದಾದ ಮುಂಗುರುಳು ಮುಖದ ಮೇಲೆ ಚಲಿಸುತ್ತಿದ್ದಾಗ ನಿಂತು ನೋಡಿ ಮುಗ್ಧರಾದರು. ಮಾರೀಚನನ್ನು ಒಂದೇ ಬಾಣದಿಂದ ಹಾರಿಸುವಾಗ ಕಂಡು ಮೆಚ್ಚಿಕೊಂಡರು. ಜನಕನ ಸಭೆಯಲ್ಲಿ ನೆರೆದ ರಾಜಲೋಕದ ಮುಂದೆ ಶಿವಧನುಸ್ಸನ್ನು ಮದಕರಿ ಕಬ್ಬಿನ ಜಲ್ಲೆಯನ್ನು ಅವಲೀಲೆಯಾಗಿ ಮುರಿಯುವಂತೆ ಮುರಿದಾಗ ಆ ರಾಮ್ಮುನಿ ಎಷ್ಟು ಹಿಗ್ಗಿರಬೇಕೋ! ಈ ಭವ್ಯ ಚಿತ್ರಗಳನ್ನು ತಮ್ಮ ಮನಃ ಫಲಕದ ಮೇಲೆ ಮುದ್ರಿಸಿಕೊಂಡು ರಾಮಭಕ್ತಾಗ್ರೇಸರರಾದ ತ್ಯಾಗಯ್ಯನವರು ಭಾವಾವೇಶಲೀನರಾಗಿ ಹಾಡಿದ್ದಾರೆ.

ಶ್ರೀರಾಮ ತಾರಕನಾಮ. ಮುನಿಗಳು ಯೋಗಿಗಳು 'ರಮಂತೇ ಯೋಗಿನೋಽನಂತೇ ಸದಾನಂದೇ ಚಿದಾತ್ಮನಿ' ಎಂದು ನಲಿದಾಡುತ್ತಾರೆ. ಉಪನಿಷತ್ತುಗಳು ರಾಮನನ್ನು ಮೋಕ್ಷದಾಯಕನೆಂದು ಧ್ಯಾನಿಸುತ್ತಿವೆ. ಶಿವನೂ ಪವಿತ್ರ ರಾಮತಾರಕಮಂತ್ರವನ್ನು ಗಿರಿಜೆಗೆ ಬೋಧಿಸಿ 'ಸಹಸ್ರನಾಮ ತತ್ತುಲ್ಯಂ ರಾಮನಾಮವರಾನನೇ' ಎಂದು ಉಪದೇಶಿಸಿದ. ಆದ್ದರಿಂದಲೇ ದಾಸವರೇಣ್ಯರಾದ ಪುರಂದರದಾಸರು 'ಆಮಂತ್ರ ಈಮಂತ್ರ ಎಂದು ಜಪಿಸಿ ಕೆಡಲಿಬೇಡ, ಸೋಮಶೇಖರ ತನ್ನ ಸತಿಗೆ ತಿಳಿಸಿದಮಂತ್ರ,' ಎಂದು ಎಚ್ಚರಿಕೆ ಕೊಟ್ಟಿದ್ದಾರೆ. ಆದ್ದರಿಂದಲೇ "ಜಾನಾತಿ ರಾಮ ತವ ನಾಮರುಚಿಂ ಮಹೇಶಃ" ಎಂಬ ಮಾತೂ ಬಂತು. ಭಕ್ತವರೇಣ್ಯರಾದ ತುಲಸಿದಾಸರು 'ರಾಮನಾಮಕೇ ದೋ ಅಕ್ಷರ್ ಮೇ ಸಬ್ ಸುಖಶಾಂತಿ ಮಿಲಾತೇ ಹೈ ರಾಮನಾಮ ಸುಖದಾಯಿ' ಎಂದು ಮೈಮರೆತು ಉಚ್ಚರಿಸಿದರು. ಆದ್ದರಿಂದ ಶ್ರೀರಾಮ ಕೋದಂಡರಾಮನಾಗಿ ತನ್ನ ಸಮರ ಪರಾಕ್ರಮವನ್ನೂ, ರಾಘವರಾಮನಾಗಿ ತನ್ನ ಸತ್ಯಪರಾಕ್ರಮವನ್ನೂ, ಜಗತ್ತಿಗೆ ಸಾರಿ ಮಾನವತ್ವದಿಂದ ದೈವತಕ್ಕೆ ಏರುವುದೇ ಮಾನವರಿಗೆ ಆದರ್ಶ ಸಾಧನಗಳಾಗಬೇಕೆಂದು ತನ್ನ ಪಾವನ ಜೀವನದಿಂದ ತೋರಿಸಿಕೊಟ್ಟಿದ್ದಾನೆ. ಮಹಾಕವಿ ಕಾಳಿದಾಸನು ವರ್ಣಿಸಿದ ರಘುವಂಶರಾಜರ 'ಆಕಾರಸದೃಶ ಪ್ರಜ್ಞಯಾಸದೃಶಾಗಮಃ ಆಗಮೈಃ ಸದೃಶಾರಂಭ, ಆರಂಭ ಸದೃಶೋದಯತಿ' ಎಂಬ ವಿಶ್ವಗುಣಾದರ್ಶಕ್ಕೆ ಶ್ರೀರಾಮಚಂದ್ರ ಉತ್ತಮ ನಿದರ್ಶನ.

ಇಂಥಾ ಧರ್ಮಮೂರ್ತಿ ಹುಟ್ಟಿದ ದೇಶದಲ್ಲಿ ಹುಟ್ಟಿದವರಿಗೆಲ್ಲರಿಗೂ ಆತ ಸದಾಕಾಲದಲ್ಲಿಯೂ ಆದರ್ಶ ವ್ಯಕ್ತಿ. ತುಲಸಿದಾಸರು ವರ್ಣಿಸಿದಂಥ ಸುಖವನ್ನು ಬಯಸಿದರೆ ಅದೇ ನಮಗೆ ಶ್ರೇಯಸ್ಸಿಗೆ ದಾರಿ ಅಲ್ಲವೇ?

ರಾಮಾಯ ತಸ್ಮೈನಮಃ ★

# ವಾಲ್ಮೀಕಿಯ




ಶ್ರೀರಾಘವಂ ದಶರಥಾತ್ಮಜ
ಮಪ್ರಮೇಯಂ
ಸೀತಾಪತಿಂ ರಘುಕುಲಾನ್ವಯ
ರತ್ನದೀಪಂ ||
ಆಜಾನುಬಾಹುಂ ಅರವಿಂದ
ದಳಾಯತಾಕ್ಷಂ
ರಾಮಂ ರಾಕ್ಷಸ ವಿನಾಶಕರಂ
ನಮಾಮಿ ||

ರಘುವಂಶೋದ್ಧಾರಕನೂ, ದಶರಥನ ಕುಲ ಪ್ರದೀಪಕನೂ, ಜಾನಕೀರಮಣನೂ, ರಘುಕುಲದ ನೃಪಕುಲದ ರತ್ನವೂ, ಆಜಾನುಬಾಹುವೂ, ಕಮಲನೇತ್ರನೂ, ರಕ್ಕಸಾಂತಕನೂ, ಆದ ಆ ಕೋದಂಡಪಾಣಿ ಶ್ರೀ ರಾಮಚಂದ್ರನಿಗೆ ನಮಸ್ಕಾರ, ಶ್ರೀರಾಘವನಿಗೆ, ಕೌಸಲ್ಯಾನಂದವರ್ಧಕನಿಗೆ, ಆಪತ್ತುಗಳನ್ನು ನಿವಾರಿಸುವವನಿಗೆ, ಸರ್ವಸಂಪದಗಳನ್ನನುಗ್ರಹಮಾಡುವವನಿಗೆ, ಲೋಕಾಭಿರಾಮನಾದ ಶ್ರೀರಾಮನಿಗೆ ಪುನಃ ಪುನಃ ನಾನು ನಮಸ್ಕರಿಸುತ್ತೇನೆ.

ಬ್ರಹ್ಮನು ಶತಕೋಟಿ ಸಂಖ್ಯಾತವಾದ ಶ್ಲೋಕಗಳಿಂದ ಕೂಡಿದ ರಾಮಾಯಣವನ್ನು ರಚಿಸಿ ಅದನ್ನು ನಾರದಾದಿಗಳಿಗೆ ಉಪದೇಶಿಸಿದನು. ನಾರದರು ರಾಮಾಯಣವನ್ನು ಭೂಲೋಕದಲ್ಲಿ ವಾಲ್ಮೀಕಿಮಹರ್ಷಿಗಳಿಗೆ ಉಪದೇಶಿಸುವ ಸಲುವಾಗಿ ಬ್ರಹ್ಮನ ಆದೇಶವನ್ನು ಪಡೆದು ನಾನಾವಿಧವಾದ ವೃಕ್ಷಗಳಿಂದಲೂ, ಕಮಲಗಳಿಂದಕೂಡಿದ ಸರೋವರಗಳಿಂದಲೂ, ಕಂಗೊಳಿಸುತ್ತಿದ್ದ ಮಹರ್ಷಿಗಳ ಆಶ್ರಮಕ್ಕೆ ನಾರಾಯಣ ನಾಮಸ್ಮರಣೆಮಾಡುತ್ತಾ ಬಂದರು. ಕೃಚ್ಛ್ರಚಾಂದ್ರಾಯಣಾದಿ ತಪಸ್ಸಿನಲ್ಲಿಯೂ, ಅಧ್ಯಯನಾಧ್ಯಾಪನಗಳಲ್ಲಿಯೂ ನಿರತರಾದ, ವೇದಾರ್ಥಗಳನ್ನು ತಿಳಿದವರಲ್ಲಿ ಶ್ರೇಷ್ಠರಾದ, ಜ್ಞಾನದಾಯಕರಾದ ನಾರದಮಹರ್ಷಿಗಳನ್ನು ಅರ್ಘ್ಯಪಾದ್ಯಾದಿಗಳಿಂದ ಪೂಜಿಸಿ, ತಪಸ್ವಿಯೂದ ವಾಲ್ಮೀಕಿ ಕೇಳಿದರು. (ವಲ್ಮೀಕ ಎಂದರೆ ಹುತ್ತ. ಹುತ್ತದಲ್ಲಿ ಹುಟ್ಟಿದವನು ವಾಲ್ಮೀಕಿ, ಭೃಗುವಂಶದಲ್ಲಿ ಹುಟ್ಟಿದ ಪ್ರಚೇತಸನ ಮಗನಾದ್ದರಿಂದ ಇವರಿಗೆ ಪ್ರಾಚೇತಸರೆಂದೂ ಹೆಸರಾಯಿತು)

'ಪರಮ ಪೂಜ್ಯರಾದ ನಾರದಮಹರ್ಷಿಗಳೇ ಈಗ ಲೋಕದಲ್ಲಿ ಸಕಲ ಕಲ್ಯಾಣ ಗುಣಗಳಿಂದ ಕೂಡಿದವನು ಯಾರು ? ವೀರ್ಯವಂತನಾರು ? ಧರ್ಮಜ್ಞನಾರು ? ಕೃತಜ್ಞನಾರು ? ಸತ್ಯಭಾಷಿ ಯಾರು ? ದೃಢ ವ್ರತನಾರು ?

ಕುಲಾಚಾರವನ್ನು ಉಲ್ಲಂಘಿಸದೆ ಆಚಾರ ವ್ಯವಹಾರಗಳನ್ನು ತಪ್ಪದೆ ನಡೆಸಿಕೊಂಡು ಹೋಗುತ್ತಿರುವವನಾರು ? ಸಕಲ ಪ್ರಾಣಿಗಳಲ್ಲಿಯೂ ದಯಾಪರನಾಗಿರುವವನು ಯಾರು ? ಚತುರ್ದಶ ವಿದ್ಯೆಗಳಲ್ಲಿಯೂ ಪಾರಂಗತನಾದ ವಿದ್ವಾಂಸನು

**ಶ್ರೀ ವಿ. ಲಕ್ಷ್ಮೀನಾರಾಯಣ**

ಯಾರು ? ಸರ್ವಕಾರ್ಯದುರಂಧರನು ಯಾವನಾದರೂ ಇರುವನೆ ? ಸರ್ವರಿಗೂ ಸದಾಕಾಲದಲ್ಲಿಯೂ ಮೋಹನರೂಪನಾಗಿರುವ ಪುರುಷನಿರುವನೆ ?

ಅತ್ಯಂತ ಧೈರ್ಯಶಾಲಿ ಯಾರು ? ಕೋಪವನ್ನು ಜಯಿಸಿದವನು ಯಾರು ? ಅಸದೃಶವಾದ ಕಾಂತಿಯುಳ್ಳ ಮನುಷ್ಯನು ಯಾರು ? ಗುಣಗಳಲ್ಲಿ ದೋಷಗಳನ್ನು ಎಣಿಸದಿರುವ ಅಸೂಯಾರಹಿತನು ಯಾರು? ಯಾವನು ಕುಪಿತನಾಗಿ ಯುದ್ಧಕ್ಕೆನಿಂತರೆ ದೇವತೆಗಳಾದಿಯಾಗಿ ಸಕಲರೂ ಭೀತರಾಗುವರು ?

ಇಂತಹ ಸಕಲ ಗುಣ ಪರಿಪೂರ್ಣನಾದವನು ಈಗಿನ ಕಾಲದಲ್ಲಿ ಯಾರಾದರೂ ಇದ್ದಾನೆಯೆ ?"

ವಾಲ್ಮೀಕಿಯ ಈ ಪ್ರಶ್ನೆಗಳನ್ನು ಕೇಳಿ ತ್ರಿಲೋಕಜ್ಞರಾದ, ಬ್ರಹ್ಮಾಂಡದಲ್ಲಿ ನಡೆಯುವ ವಿದ್ಯಮಾನಗಳೆಲ್ಲವನ್ನೂ ಅಂತರ್ದೃಷ್ಟಿಯಿಂದ ತಿಳಿಯಲು ಸಮರ್ಥರಾದ ನಾರದರಿಗೆ ಬಹಳ ಸಂತೋಷವಾಯಿತು. ಅವರು ಹೇಳತೊಡಗಿದರು—

'ಮಹರ್ಷಿ, ತಮ್ಮಿಂದ ಕೇಳಲ್ಪಟ್ಟ ಬಹುಗುಣಗಳಿಂದ ಯುಕ್ತರಾದ ಮನುಷ್ಯರು ಸಿಕ್ಕುವುದು ಬಹಳ ಕಷ್ಟ. ಆದರೂ ಸಹ ತಾವು ಹೇಳಿದ ಸಕಲ ಗುಣಗಳಿಂದಲೂ ಪರಿಪೂರ್ಣನಾದ ಒಬ್ಬನೇ ಒಬ್ಬ ನರಪುಂಗವನ ವಿಷಯವನ್ನು ಜ್ಞಾಪಿಸಿಕೊಂಡು ಹೇಳುವೆನು.

ಇಕ್ಷ್ವಾಕು ವಂಶೋತ್ಪನ್ನನಾದ "ರಾಮ, ರಾಮ" ಎಂದು ಜನರಿಂದ ಕರೆಯಲ್ಪಡುವ ನರಪುಂಗವನು ನೀವು ಹೇಳಿದ ಸಕಲ ಲಕ್ಷಣಗಳಿಂದ ಪರಿಪೂರ್ಣನಾಗಿರುವನು. ರಾಮನು ವಿಕಾರರಹಿತವಾದ ಆತ್ಮವುಳ್ಳವನು. ಮಹಾವೀರ್ಯವಂತನು. ಸ್ವಯಂ ಪ್ರಕಾಶನು. ನಿತ್ಯಸಂತುಷ್ಟನು, ಪ್ರಪಂಚವೆಲ್ಲವನ್ನು ತನ್ನ ವಶದಲ್ಲಿ ಇಟ್ಟುಕೊಂಡಿರುವನು, ಜಿತೇಂದ್ರಿಯನು, ಸರ್ವಜ್ಞನು, ನೀತಿಶಾಸ್ತ್ರ ವಿಶಾರದನು, ಅಷ್ಟೈಶ್ವರ್ಯ ಸಂಪನ್ನನು, ಶತ್ರುವಿನಾಶಕನು, ಜಗನ್ಮೋಹನಾಕಾರನು, ಆಜಾನುಬಾಹು, ಅರಿಷಡ್ವರ್ಗವನ್ನು ದಮನ ಮಾಡಿರುವನು, ಶ್ಯಾಮಲವರ್ಣನು, ಮಹಾತೇಜಸ್ವಿಯು, ಕಮಲ ನೇತ್ರನು, ಶರಣಾಗತ ರಕ್ಷಕನು, ಸತ್ಯ ಪ್ರತಿಜ್ಞನು,ನಿತ್ಯಶುದ್ಧನು, ಗುರುಜನ ವಿಧೇಯನು, ಶತ್ರು ಸಂಹಾರಕನು,

ಸಕಲ ಪ್ರಾಣಿ ಸಂರಕ್ಷಕನು, ವೇದಾಧ್ಯಯನ ಸಂಪನ್ನನು, ಧನುರ್ವಿದ್ಯಾವಿಶಾರದನು, ಲೌಕಿಕಕರ್ತವ್ಯ ನಿರ್ವಹಣೆಯಲ್ಲಿ ಕುಶಲನು, ಸಕಲ ಲೋಕ ವಂದ್ಯನು, ಸಕಲ ಕಲ್ಯಾಣ ಗುಣ ಪರಿಪೂರ್ಣನು, ಗಾಂಭೀರ್ಯದಲ್ಲಿ ಸಮುದ್ರಕ್ಕೆ ಸಮಾನನು, ಧೈರ್ಯದಲ್ಲಿ ಹಿಮವತ್ಪರ್ವತಕ್ಕೆ ಸಮಾನನಾಗಿದ್ದಾನೆ. ಪರಾಕ್ರಮದಲ್ಲಿ ವಿಷ್ಣುವಿಗೆ ಸಮಾನನು, ದುಃಖ ಬಂದಾಗ ಶೋಕಿಸದೆ ಪರ್ವತದಂತೆ ಧೈರ್ಯದಿಂದಿರುತ್ತಾನೆ.

ಕಾಲಾಗ್ನಿಗೆ ಸಮಾನವಾದ ಕೋಪವು ರಾಮನ ಹೃದಯಾಂತರಾಳದಲ್ಲಿ ಅಡಗಿದೆ. ಪೃಥ್ವಿಯಂತೆ ಕ್ಷಮಾಗುಣಪರಿಪೂರ್ಣನು, ತ್ಯಾಗದಲ್ಲಿ ಕುಬೇರನಿಗೆ ಸಮಾನನು, ಸತ್ಯ ವಚನ ಪರಿಪಾಲನೆಯಲ್ಲಿ ಬೇರೊಬ್ಬ ಧರ್ಮ ದೇವತೆಯು ಭೂಮಿಯಲ್ಲಿ ಅವತರಿಸಿರುವನೋ ಎಂಬಂತೆ ಇರುತ್ತಾನೆ."

ಹೀಗೆಂದ ನಾರದರು ದೇವಲೋಕಕ್ಕೆ ತೆರಳಿದನಂತರ ವಾಲ್ಮೀಕಿಗಳು ಮಧ್ಯಾಹ್ನಿಕ ಕ್ರಿಯೆಗಾಗಿ ಗಂಗಾನದಿಗೆ ಸಮೀಪದಲ್ಲಿದ್ದ ತಮಸಾನದಿಯ ತೀರಕ್ಕೆ ಹೊರಟರು. ತಮಸಾತೀರಕ್ಕೆ ಹೋಗಿ ವಾಲ್ಮೀಕಿಗಳು ನದಿಯ ನೀರು ಕೆಸರಿಲ್ಲದೆ ಸ್ವಚ್ಛವಾಗಿದ್ದುದನ್ನು ಕಂಡು ಪಕ್ಕದಲ್ಲಿಯೇ ನಿಂತಿದ್ದ ಭರದ್ವಾಜನೆಂಬ ಶಿಷ್ಯನನ್ನು ಕುರಿತು ಹೇಳಿದರು.

"ಭರದ್ವಾಜ; ಈ ತಮಸಾನದಿಯ ನೀರನ್ನು ನೋಡು, ಎಷ್ಟು ಸ್ವಚ್ಛವಾಗಿದೆ. ನೀರಿನ ಕೆಳಭಾಗದಲ್ಲಿ ಕೆಸರಿಲ್ಲ. ಸುಳಿಗಳಾಗಲಿ, ಜಲಪಾತಗಳಾಗಲಿ ಇಲ್ಲದೆ ಪ್ರಸನ್ನವಾದ ಪ್ರವಾಹದಿಂದ ಕೂಡಿರುವುದು. ಇಲ್ಲಿಯೇ ನನ್ನ ಕಮಂಡಲವನ್ನಿಡು. ನನಗೆ ಸ್ನಾನಕ್ಕಾಗಿ ನಾರುಬಟ್ಟೆಯನ್ನು ಕೊಡು. ಇಲ್ಲಿಯೇ ನಾನು ಮಾಧ್ಯಾಹ್ನಿಕಸ್ನಾನ ಮಾಡುತ್ತೇನೆ."

ಜಿತೇಂದ್ರಿಯರಾದ ವಾಲ್ಮೀಕಿಮಹರ್ಷಿಗಳು ಶಿಷ್ಯನಿಂದ ಸ್ನಾನವಸ್ತ್ರವನ್ನು ಪಡೆದು ನದಿಯ ದಂಡೆಯಲ್ಲಿದ್ದ ವನದ ಸೊಬಗನ್ನು ನೋಡುತ್ತ ಸಂಚರಿಸಿದರು.

ಹೀಗೆ ಸಂಚರಿಸುತ್ತಿರುವಾಗ ತಮಸಾ ನದಿಯ ತೀರಪ್ರದೇಶದಲ್ಲಿ ಮನೋಹರವಾಗಿ ಧ್ವನಿ ಮಾಡುತ್ತ ವೃಕ್ಷದಿಂದ ವೃಕ್ಷಕ್ಕೆ ಜೊತೆಯಲ್ಲಿಯೇ ಹಾರಾಡುತ್ತಿದ್ದ ಕ್ರೌಂಚ ಪಕ್ಷಿ ಯುಗ್ಮವನ್ನು ಭಗವಾನ್ ವಾಲ್ಮೀಕಿಗಳು ಕಂಡರು.

ಆಗ ಸರ್ವಪ್ರಾಣಿಗಳ ವಿಷಯದಲ್ಲಿಯೂ ವೈರಬುದ್ಧಿಯಿರುವ, ಪಾಪಕಾರ್ಯ ಮಾಡಲು ಸ್ವಲ್ಪವೂ ಹಿಂಜರಿಯದ ನಿಷಾದನೊಬ್ಬನು ಆ ಪಕ್ಷಿ ಯುಗ್ಮದಲ್ಲಿ ಗಂಡು ಪಕ್ಷಿಗೆ ತನ್ನ ಬಾಣದಿಂದ ಗುರಿಯಿಟ್ಟು ಹೊಡೆದನು.

ಈ ಪಕ್ಷಿಗಳು ಯಾವಾಗಲೂ ಪರಸ್ಪರ ವಿರಹವೆಂಬುದನ್ನೇ ಕಾಣದೆ ಅನ್ಯೋನ್ಯ ಸಹಚಾರಿಗಳಾಗಿದ್ದವು. ಹೆಣ್ಣು ಹಕ್ಕಿಯು ಗಂಡನಾದ ಗಂಡು ಕ್ರೌಂಚಪಕ್ಷಿಯಿಂದ ಬೇರ್ಪಟ್ಟು ಮಾಡುತ್ತಿದ್ದ ರೋದನವು ನಿಶ್ಚಯವಾಗಿಯೂ ಕರುಣಾಜನಕವಾಗಿದ್ದಿತು.

ನಿಷಾದನಿಂದ ಕೆಡಹಲ್ಪಟ್ಟು ಭೂಮಿಯ ಮೇಲೆ ಅತ್ತಲಿತ್ತ ಹೊರಳಾಡುತ್ತಾ ಪ್ರಾಣ ಬಿಡುವುದರಲ್ಲಿದ್ದ ಪಕ್ಷಿಯನ್ನು ನೋಡಿ ಮಹಾತ್ಮನಾದ ವಾಲ್ಮೀಕಿಮಹರ್ಷಿಯ ಹೃದಯದಲ್ಲಿ ಕರುಣೆಯು ಉದ್ಭೂತವಾಯಿತು. ಕರುಣಾಮಯನಾದ ವಾಲ್ಮೀಕಿಯು ನಿಷಾದನ ಕಾರ್ಯವನ್ನು ಅಧರ್ಮಾಚರಣೆಯೆಂದು ನಿಶ್ಚಯಿಸಿದನು. ಆಗ ಶ್ಲೋಕರೂಪವಾದ ಈ ವಾಣಿಯು ವಾಲ್ಮೀಕಿಯ ಮುಖಾರವಿಂದದಿಂದ ಹೊರಟಿತು,

ಮಾನಿಷಾದ ಪ್ರತಿಷ್ಠಾಂ ತ್ವಮಗಮಃ
ಶಾಶ್ವತೀ ಸಮಾಃ ||
ಯತ್ಕ್ರೌಂಚಮಿಥುನಾದೇಕಮವಧೀಃ
ಕಾಮ ಮೋಹಿತಂ ||

" ಹೇ ನಿಷಾದ ಕಾಮೇಚ್ಛೆಯಿಂದ ಪರಿಭ್ರಮಣ ಮಾಡುತ್ತಿದ್ದ ಕ್ರೌಂಚಪಕ್ಷಿ ಯುಗ್ಮದಲ್ಲಿ ಗಂಡುಪಕ್ಷಿಯನ್ನು ಹೊಡೆದು ಕೊಂದದ್ದರಿಂದ ನಿನಗೂಸಹ ಒಂದೆಡೆಯಲ್ಲಿಯೇ ನಿವಾಸವು ಇಲ್ಲದಂತಾಗಲಿ." ಇಂದೂ ಸಹ ಕಾಡುಜನರು ನಿಂತಲ್ಲಿ ನಿಲ್ಲದೆ ಯಾವಾಗಲೂ ಸಹ ಕಾಡು ಮೇಡುಗಳಲ್ಲಿ ಅಲೆಯುತ್ತಿರುವರು. ಇದನ್ನು " ನಿನಗೆ ಸದ್ಗತಿ ಉಂಟಾಗದಿರಲಿ" ಎಂದೂ ಅರ್ಥೈಸಿರುವುದುಂಟು.

(ಈ ಶ್ಲೋಕ ರಾಮಾಯಣದ ಕಥೆಗೆ ಮೊದಲ ಶ್ಲೋಕ ವಾಯಿತೆಂಬುದಷ್ಟೆ ಅಲ್ಲ ಕಥೆಯ ವಾಹಕ ಛಂದಸ್ಸಾಯಿ ತೆಂಬುದಷ್ಟೇ ಅಲ್ಲ; ಪೀಠಿಕೆಯೂ ಆಯಿತೆಂಬುದನ್ನು ಗಮನಿಸಬೇಕು. ಕ್ರೌಂಚ ಮಿಥುನಗಳ ಅವಿನಾಭಾವ ಸಂಬಂಧ, ಅಗಲಿಕೆಯಿಂದಾದ ದುಸ್ಸಹವಾದ ದುಃಖ, ಹಿನ್ನೆಲೆಯಲ್ಲಿ ವಿಧಿಯ ಪ್ರತಿಕಾರ ಯೋಜನಗಳೆಲ್ಲ ಧ್ವನಿತವಾಗಿ ರಾಮಾಯಣದ ಕಥೆಯ ಮೂಲ ಸೂಚನೆಯೂ ಇಲ್ಲಿದೆ – ಸಂ ) ★

# ಶ್ರೀ ಪದ್ಮಾವತೀ ಅಮ್ಮನವರ ದೇವಾಲಯ

## ತಿರುಚಾನೂರು

ತಿರುಚಾನೂರು ಶ್ರೀ ಪದ್ಮಾವತೀ ಅಮ್ಮನವರ ದೇವಾಲಯದಲ್ಲಿ ನಿತ್ಯಕುಂಕುಮಾರ್ಚನೆಯ ಶುಲ್ಕವನ್ನು ರೂ 150-00 ಗಳಿಗೆ ನಿಗಧಿಗೊಳಿಸಲಾಗಿದೆ, ಈ ಹೊಸ ಶುಲ್ಕ ಪದ್ಧತಿ ಈ ಕೂಡಲೇ ಜಾರಿಗೆ ಬಂದಿದ್ದು ಈ ಹಿಂದೆಯೇ ನಿತ್ಯಕುಂಕುಮಾರ್ಚನೆಯನ್ನು ಮಾಡಿಸಲು ಶುಲ್ಕ ಪಾವತಿ ಮಾಡಿರುವ ಗೃಹಸ್ಥರ ಕೈಂಕರ್ಯವನ್ನು ಹಿಂದಿನಂತೆಯೇ ಮುಂದುವರಿಸಲಾಗುವುದು. ಆಸಕ್ತ ಭಕ್ತರು ವಿವರಗಳಿಗೆ ಸ್ಥಳೀಯ ಪೇಷ್ಕಾರ್ ಅವರನ್ನು ವಿಚಾರಿಸಬಹುದು.

**ಪೇಷ್ಕಾರ್**

# ಸಪ್ತರ್ಷಿ ರಾಮಾಯಣ

ಆದಿಕವಿ ವಾಲ್ಮೀಕಿ ರಚಿಸಿದ ಮಹಾಕಾವ್ಯವೇ ರಾಮಾಯಣ: ಇದು 24000 ಶ್ಲೋಕವುಳ್ಳದ್ದಾಗಿದ್ದು ವಿಶ್ವಸಾಹಿತ್ಯದ 2ನೇ ಬೃಹತ್ ಕಾವ್ಯವಾಗಿದೆ. ಅಂದಿನಿಂದಲೂ ಅನೇಕ ರಾಮಾಯಣಗಳು ಉದಿಸುತ್ತಿವೆ. ಆನಂದ ರಾಮಾಯಣ, ಆಧ್ಯಾತ್ಮ ರಾಮಾಯಣ, ಅದ್ಭುತರಾಮಾಯಣ, ಸಂಗ್ರಹ ರಾಮಾಯಣ, ತುಲಸೀ ರಾಮಾಯಣ ಅಥವಾ ರಾಮ ಚರಿತ ಮಾನಸ ಮುಂತಾದ ಕೃತಿಗಳು ಈ ಸಾಲಿನಲ್ಲಿ ಪ್ರಮುಖವಾದವುಗಳು. ಮೂಲ ಸಂಸ್ಕೃತ ಭಾಷೆಯಲ್ಲಿರುವ ವಾಲ್ಮೀಕಿ ರಾಮಾಯಣ ಬೇರೆ ಬೇರೆ ಪ್ರಾಂತಗಳ ಹಾಗೂ ದೇಶ ಭಾಷೆಗಳಿಗೂ ಅನುವಾದಿತವಾಗಿರುವುದನ್ನು ಹಾಗೂ ಇತರ ಕೃತಿಗಳಿಗೆ ಮೂಲ ಗ್ರಂಥವಾಗಿ ಬಳಸಿಕೊಂಡಿರುವುದನ್ನು ಗಮನಿಸಿದಾಗ ಇದರ ಭಾಷಾ ಸರಳತೆ ಹಾಗೂ ಜನಪ್ರಿಯತೆ ಬಗ್ಗೆ ಮತ್ತೆ ಹೇಳಬೇಕಾಗಿಲ್ಲ.

ಸಾಹಿತ್ಯಕ ದೃಷ್ಟಿಯಿಂದ ಹಾಗೂ ವಿಮರ್ಶಾತ್ಮಕ ದೃಷ್ಟಿಯಿಂದ ನೋಡುವವರಿಗೆ ರಾಮಾಯಣವು ಉತ್ತಮ ಗ್ರಂಥವೆನಿಸಿದಂತೆ ತಾತ್ತ್ವಿಕ ಹಾಗೂ ಆಧ್ಯಾತ್ಮಿಕ ದೃಷ್ಟಿಕೋನವುಳ್ಳವರಿಗೂ ಇದು ಪವಿತ್ರ ಗ್ರಂಥವೂ ಆಗಿ, ಈ ಮೇಲಿನ ರಾಮಾಯಣಗಳಲ್ಲದೇ 'ಸಪ್ತರ್ಷಿ ರಾಮಾಯಣ' ವೆಂಬ ಪುಟ್ಟ ರಾಮಾಯಣವೊಂದು ಮೊದಲಿನಿಂದಲೂ ಸಾಂಪ್ರದಾಯಕವಾಗಿ ಪ್ರಚಲಿತವಿದೆ. ಕಶ್ಯಪ, ಅತ್ರಿ, ಭರದ್ವಾಜ, ವಿಶ್ವಾಮಿತ್ರ, ಗೌತಮ, ಜಮದಗ್ನಿ ಹಾಗೂ ವಸಿಷ್ಠ–ಈ ಏಳು ಮಹರ್ಷಿಗಳು ಒಂದೊಂದು ಪದ್ಯದ ಮೂಲಕ ಕ್ರಮವಾಗಿ ಸಂಪೂರ್ಣ ರಾಮಕಥೆಯನ್ನು ಸಂಗ್ರಹಿಸಿದ್ದಾರೆ. ರಾಮ ಕಥೆಯೇ ಸೊಗಸು ಜ್ಞಾನಿಗಳ ಮುಖದಿಂದ ಬಂದಾಗಲಂತೂ ಅದು ಅಮೃತ. ಅದೂ ಸಪ್ತರ್ಷಿಗಳಂತಹ ತಪಸ್ವಿಗಳ ಮುಖದಿಂದ ಹರಿದು ಬಂದಿದ್ದರಿಂದ ಅದಕ್ಕಿಂತ ಮಧುರವಾದದ್ದು ಈ ಜಗದಲ್ಲಿ ಬೇರೊಂದಿಲ್ಲ.

ಆರ್ಷ ರಾಮಾಯಣವನ್ನು ಪ್ರಾರಂಭಿಸುತ್ತಾ ಕಶ್ಯಪ ಋಷಿಗಳು ಮೊದಲನೇ ಪದ್ಯದಲ್ಲಿ ವಾಲ್ಮೀಕಿ ರಾಮಾಯಣದ ಬಾಲಕಾಂಡದ ಪ್ರಮುಖ ಘಟನೆಗಳನ್ನು ಕ್ರೋಡೀಕರಿಸಿದ್ದಾರೆ. ಮುಂದೆ ಅತ್ರಿ ಋಷಿಗಳು ಅಯೋಧ್ಯಾಕಾಂಡದ ಕಥೆಯನ್ನು ಪ್ರಾರಂಭಿಸುತ್ತಾ ರಾಮಪಟ್ಟಾಭಿಷೇಕಕ್ಕೆ ಅಡ್ಡಿ ಮಾಡಿದ ಮಂಥರೆಯ ದುರಾಲೋಚನೆ, ಕೈಕೇಯಿಯ ಕೇಳಿದ ವರಗಳು ಇವುಗಳನ್ನು ವಿವರಿಸುತ್ತಾ ಹೃದಯ ಮಿಡಿಯುವ ಕರುಣಾಜನಕ ದೃಶ್ಯವನ್ನು ಮುಂದಿಡುತ್ತಾರೆ.

ನಂತರ ಭರದ್ವಾಜ ಋಷಿಗಳು ರಾಮ ಕಥೆಯನ್ನು ಮುಂದುವರಿಸುತ್ತಾ ರಾಮನ ಅರಣ್ಯಗಮನ, ಚಿತ್ರಕೂಟವಾಸ ಮುಂತಾದ ಅಯೋಧ್ಯಾಕಾಂಡದ ಕಥೆಯನ್ನು ಸ್ಪರ್ಶಿಸುತ್ತಾರೆ.

ಮುಂದೆ ವಿಶ್ವಾಮಿತ್ರ ಋಷಿಗಳು ಪಂಚವಟಿಯಲ್ಲಿ ರಾಮನ ವಾಸ, ಶೂರ್ಪನಖಿಗೆ ಶಾಸ್ತಿ, ಖರ, ದೂಷಣ ಮಾರೀಚ ಮೊದಲಾದ ದುಷ್ಟರ ಸಂಹಾರ–ಮುಂತಾದ ಅರಣ್ಯಕಾಂಡದ ಕಥೆಯೊಂದಿಗೆ ವಾಲಿ ನಿಗ್ರಹ, ಸುಗ್ರೀವ ಪಟ್ಟಾಭಿಷೇಕ ಮುಂತಾದ ಕಿಷ್ಕಿಂಧಾಕಾಂಡದ ಕಥೆಯನ್ನು ಮುಗಿಸಿ ಬಿಡುತ್ತಾರೆ.

ಅನಂತರ ಗೌತಮ ಋಷಿಗಳು ಸುಂದರಕಾಂಡದ ಕಥೆಯನ್ನೂ ಜಮದಗ್ನಿ ಋಷಿಗಳು ಯುದ್ಧಕಾಂಡದ ಕಥೆಯನ್ನು, ವಸಿಷ್ಠ ಮಹರ್ಷಿಗಳು ಉತ್ತರ ಕಾಂಡದ ಕಥೆಯನ್ನೂ ವಿವರಿಸುತ್ತಾರೆ. ಕೊನೆಗೆ ಏಳೂ ಋಷಿಗಳೂ ಎಂಟನೇ ಪದ್ಯದಲ್ಲಿ ರಾಮ ಮಹಿಮಾರೂಪವಾದ ಈ ಪುಟ್ಟ ರಾಮಾಯಣದ ಪಠನ ಶ್ರವಣಗಳ ಪುಣ್ಯ ಫಲಗಳನ್ನು ತಿಳಿಸುತ್ತಾರೆ.

ರಾಮಾಯಣದ ಪ್ರಮುಖ ಹಾಗೂ ರಸ ಘಟ್ಟಗಳಾವುವೂ ಬಿಟ್ಟುಹೋಗದಂತೆ ಈ ಪುಟ್ಟ ರಾಮಾಯಣದಲ್ಲಿ ಸಂಗ್ರಹಿಸಲಾಗಿದೆ. ಅತ್ಯಂತ ವಿಸ್ತೃತ ಗ್ರಂಥದ ಅತಿ ಸಂಕ್ಷಿಪ್ತ ಸಂಗ್ರಹದ ಉದಾಹರಣೆ ಇದನ್ನು ಬಿಟ್ಟರೆ ಬೇರೊಂದಿರಲಾರದು, ಅನ್ಯಾದೃಶನಾದ ಈ ಕೌಶಲ ತಪಸ್ವಿ ಹಾಗೂ ಜ್ಞಾನಿಗಳಾದ ಆ ಋಷಿಗಳಿಗಲ್ಲದೇ ಬೇರೆ ಯಾರಿಗೂ ಬರಲಾರದು.

ವಾಲ್ಮೀಕಿ ರಾಮಾಯಣದ ಪಾರಾಯಣದಿಂದ ಪಾಪಗಳ ಪರಿಹಾರ, ಸುಖ – ಸಂಪತ್ತುಗಳ ಪ್ರಾಪ್ತಿ ಆಗುವುದೇನೋ ನಿಜ, ಆದರೆ ಎಡೆಬಿಡದೆ ಗಡಿಬಿಡಿಯಿಂದ ಬಿಡುವಿಲ್ಲದೇ ನಡೆಯುವ ಇಂದಿನ ಶತಮಾನದ ಜನರಿಗೆ 24000 ಶ್ಲೋಕಗಳ ವಾಲ್ಮೀಕಿ ರಾಮಾಯಣದ ಬೃಹದ್ ಗ್ರಂಥದ ಪ್ರತಿ ನಿತ್ಯ ಪಾರಾಯಣ ಕಷ್ಟಸಾಧ್ಯ. ಇಂತಹ ಜನರಿಗೆ ವರದಾನವೆಂಬಂತೆ 'ಸಪ್ತರ್ಷಿ ರಾಮಾಯಣ' ಮೂಡಿ ಬಂದಿದೆ. ಇದರ ಪಾರಾಯಣದಿಂದ ಸಂಪೂರ್ಣ ರಾಮಾಯಣ

ಶ್ರೀ ಗುರುರಾಜಾಚಾರ್ಯ ಗುಡಿ

ಪಾರಾಯಣದ ಫಲ ಬರುತ್ತದೆ. ಅಲ್ಪ ವೇಳೆಯಲ್ಲಿಯೇ ಪ್ರತಿನಿತ್ಯ ಇದನ್ನು ಪಠಿಸಬಹುದು. ಜ್ಞಾನಿಗಳೂ ತಪಸ್ವಿಗಳೂ ಆದ ಸಪ್ತರ್ಷಿಗಳ ವಾಣಿಯಮೂಲಕ ಹರಿದ ರಾಮಕಥಾಮೃತ ನಮ್ಮನ್ನೆಲ್ಲ ಪಾವನಗೊಳಿಸುವುದರಲ್ಲಿ, ಯಾವ ಸಂದೇಹವೂ ಇಲ್ಲ. ಭಕ್ತಿ ಪುರಸ್ಸರವಾಗಿ ಅರ್ಥ ಸಹಿತವಾಗಿ ಪಠಿಸಿದರೆ ಅಧಿಕ ಫಲ. ಆದಕ್ಕಾಗಿ ಇಲ್ಲಿ ಈ ಪುಟ್ಟ ರಾಮಾಯಣವನ್ನು ಅರ್ಥ ಸಹಿತವಾಗಿ ಕೊಡಲಾಗಿದೆ.



## ಕಶ್ಯಪ ಉವಾಚ

ಜಾತಃ ಶ್ರೀ ರಘು ನಾಯಕೋ
ದಶರಥಾನ್ಮನ್ಯಾಶ್ರಮಾತ್ತಾಟಕಾಂ
ಹತ್ವಾ ರಕ್ಷಿತ ಕೌಶಿಕ ಕ್ರತುವರಃ
ಕೃತ್ವಾಽಪ್ಯಹಲ್ಯಾಂ ಶುಭಾಂ ।
ಭಂಕ್ತ್ವಾ ರುದ್ರಶರಾಸನಂ ಜನಕಜಾಂ
ಪಾಣೌ ಗೃಹೀತ್ವಾ ತತೋ
ಜಿತ್ವಾರ್ಧಾಧ್ವನಿ ಭಾರ್ಗವಂ
ಪುನರಗಾತ್ ಸೀತಾ ಸಮೇತಃ ಪುರೀಂ ॥

ರಘುವಂಶದ ನಾಯಕನಾದ ಶ್ರೀರಾಮಚಂದ್ರನು ದಶರಥ ಮಹಾರಾಜನಿಂದ ಜನಿಸಿದನು. ಯಜ್ಞ ರಕ್ಷಣೆಗಾಗಿ ಹೊರಟ ಶ್ರೀರಾಮನು ವಿಶ್ವಾಮಿತ್ರ ಋಷಿಗಳ ಆಶ್ರಮ ಪ್ರದೇಶದ ಬಳಿಯಲ್ಲಿ ತಾಟಕೆ ಎಂಬ ರಾಕ್ಷಸಿಯನ್ನು ಸಂಹರಿಸಿದನು. ವಿಶ್ವಾಮಿತ್ರನ ಶ್ರೇಷ್ಠ ಯಾಗಾದಿಗಳನ್ನು ದುಷ್ಟ ರಾಕ್ಷಸರ ಹಾವಳಿಯಿಂದ ರಕ್ಷಿಸಿದನು. ಅಹಲ್ಯೆಯನ್ನು ಪಾಪ ವಿಮುಕ್ತಳನ್ನಾಗಿ ಮಾಡಿದನು. ಅಸಾಧ್ಯವಾದ ಶಿವಧನುಸ್ಸನ್ನು ಮುರಿದು ಜನಕರಾಜನ ಮಗಳಾದ ಸೀತೆಯನ್ನು ವಿವಾಹವಾಗಿ, ನಂತರ ಮಾರ್ಗ ಮಧ್ಯದಲ್ಲಿ ಪರಶುರಾಮನಿಂದ ಜಯಶ್ರೀಯನ್ನು ಹೊಂದಿ ಸೀತೆಯೊಂದಿಗೆ ಅಯೋಧ್ಯೆಯನ್ನು ಮತ್ತೆ ಪ್ರವೇಶಿಸಿದನು.

## ಅತ್ರಿರುವಾಚ

ದಾಸ್ಯಾ ಮಂಥರಯಾ ದಯಾ –
ರಹಿತಯಾ ದುರ್ಬೋಧಿತಾ ಕೈಕೇಯೀ
ಶ್ರೀರಾಮ ಪ್ರಥಮಾಭಿಷೇಕ ಸಮಯೇ
ಮಾತಾಽಪ್ಯಯಾಚದ್ವರೌ ।
ಭರ್ತಾರಂ ಭರತಃ ಪ್ರಶಾಸ್ತು ಧರಣಿಂ
ರಾಮೋ ವನಂ ಗಚ್ಛತಾತ್
ಇತ್ಯಾಕರ್ಣ್ಯ ಸಚೋತ್ತರಂ ನಹಿದದೌ
ದುಃಖೇನ ಮೂರ್ಛಾಂ ಗತಃ ॥ 2 ॥

ಶ್ರೀರಾಮನ ಯೌವರಾಜ್ಯಾಭಿಷೇಕದ ಸಿದ್ಧತೆ ನಡೆದಿದೆ. ರಾಮನ ಅಸಾಧಾರಣ ಸದ್ಗುಣಗಳಿಂದ ಆಕರ್ಷಿತಳಾದ ಕೈಕೇಯಿಗೆ ರಾಮನಲ್ಲಿಯೂ ಭರತನಷ್ಟೇ ಪ್ರೀತಿ, ವಾತ್ಸಲ್ಯ ಅದರೆ ಆಕಾರದಂತೆ ವಕ್ರವಾದ ಬುದ್ಧಿಯುಳ್ಳ ದಾಸಿ ಮಂಥರೆಯ ಕೆಟ್ಟ ಪ್ರೇರಣೆಯಿಂದ ದುರ್ಬೋಧನೆ ಹೊಂದಿದವಳಾಗಿ ಕೈಕೇಯಿಯು ದಶರಥನು ತನಗೆ ಈ ಮೊದಲು ಕೊಡಮಾಡಿದ್ದ ಎರಡು ವರಗಳನ್ನು "ಭರತನು ಸಕಲ ಸಂಪದ್ಭರಿತವಾದ ರಾಜ್ಯವನ್ನಾಳಬೇಕು ಮತ್ತು ಹದಿನಾಲ್ಕು ವರ್ಷ ರಾಮನು ವನವಾಸ ಮಾಡಬೇಕು." ಎಂಬುದಾಗಿ ಕೇಳಿದಳು. ಈ ಮಾತನ್ನು ಕೇಳಿದ ದಶರಥ ಯಾವ ಉತ್ತರವನ್ನೂ ಕೊಡಲಿಲ್ಲ. ಅಷ್ಟೇ ಅಲ್ಲ, ಉತ್ತರ ಕೊಡುವ ಪರಿಸ್ಥಿತಿಯಲ್ಲಿಯ ಅವನು ಉಳಿಯದೆ ಎಚ್ಚರ ತಪ್ಪಿ ನೆಲಕ್ಕುರುಳಿದನು.

## ಭರದ್ವಾಜ ಉವಾಚ

ಶ್ರೀರಾಮಃ ಪಿತೃಶಾಸನಾತ್ ವನಮಗಾತ್
ಸೌಮಿತ್ರಿ ಸೀತಾನ್ವಿತೋ
ಗಂಗಾಂ ಪ್ರಾಪ್ಯ ಜಟಾಂ ನಿಬಧ್ಯ ಸಗುಹಃ
ಸಚ್ಚಿತ್ರಕೂಟೇ ವಸನ್ ।
ಕೃತ್ವಾ ತತ್ರ ಪಿತೃಕ್ರಿಯಾಂ ಸಭರತೋ
ದತ್ವಾಽಭಯಂ ದಂಡಕೇ
ಪ್ರಾಪ್ಯಾಗಸ್ತ್ಯ ಮುನೀಶ್ವರಂ ತದುದಿತಂ
ಧೃತ್ವಾ ಧನುಶ್ಚಾಕ್ಷಯಂ ॥ 3 ॥

ಪಿತೃವಾಕ್ಯ ಪರಿಪಾಲಕನಾದ ಶ್ರೀರಾಮನು ತಂದೆಯ ಆಜ್ಞೆಯಂತೆ ಕಾಡಿಗೆ ಹೊರಟನು. ಬೇಡವೆಂದು ತಡೆದರೂ ಸೀತೆ ಹಾಗೂ ಲಕ್ಷ್ಮಣ ಇಬ್ಬರೂ ರಾಮನನ್ನು ಹಿಂಬಾಲಿಸಿದರು ಮೂವರೂ 'ಗುಹ'ನೆಂಬ ಬೇಡರ ರಾಜನ ಸಹಾಯದಿಂದ ಗಂಗೆಯ ಪಶ್ಚಿಮ ದಡಕ್ಕೆ ಬಂದು ಜಟೆಯನ್ನು ಧರಿಸಿ ಸುಂದರವಾದ 'ಚಿತ್ರಕೂಟ' ಪರ್ವತದ ಸ್ಥಳದಲ್ಲಿ ನೆಲೆಸಿದರು.

ರಾಮನ ಅಗಲಿಕೆಯ ದುಃಖದಿಂದ ನೊಂದ, ಬೆಂದ ದಶರಥನು ಮರಣ ಹೊಂದುತ್ತಾನೆ ಭರತನು ಕಾಡಿಗೆ ಬಂದು ನಡೆದ ವಿಷಯವನ್ನು ತಿಳಿಸುತ್ತಾನೆ. ರಾಮನು ಸಹೋದರರಿಂದೊಡಗೂಡಿ ತಂದೆಯ ಮರಣೋತ್ತರ ಶ್ರಾದ್ಧ–ತರ್ಪಣಾದಿಗಳನ್ನು ಅಲ್ಲಿಯೇ ಮಾಡುತ್ತಾನೆ. ದಂಡಕಾರಣ್ಯದಲ್ಲಿ ನೆಲೆಸಿರುವ ಋಷಿ ಮೊದಲಾದವರಿಗೆ ಅಭಯ ನೀಡಿದನು. ಅಗಸ್ತ್ಯ ಮಹರ್ಷಿಗಳನ್ನು ಸಂದರ್ಶಿಸಿ ಅವರ ಮಾತಿನಂತೆ ಅಕ್ಷಯವಾದ (ಸೋಲಿಲ್ಲದ) ಧನುಸ್ಸನ್ನು ಸ್ವೀಕರಿಸಿದನು

## ವಿಶ್ವಾಮಿತ್ರ ಉವಾಚ

ಗತ್ವಾ ಪಂಚವಟೀಮಗಸ್ತ್ಯವಚನಾತ್
ದತ್ವಾಽಭಯಂ ಮೌನಿನಾಂ
ಛಿತ್ವಾ ಶೂರ್ಪಣಖಾಸ್ಯ ಕರ್ಣಯುಗಲಂ
ತ್ರಾತುಂ ಸಮಸ್ತಾನ್ ಮುನೀನ್ ।
ಹತ್ವಾ ತಂ ಚ ಖರಂ ಸುವರ್ಣಹರಿಣಂ
ಭಿತ್ವಾ ತಥಾ ವಾಲಿನಂ
ತಾರಾ ರತ್ನಮವೈರಿ ರಾಜ್ಯಮಕರೋತ್
ಸರ್ವಂಚ ಸುಗ್ರೀವಸಾತ್ ॥ 4 ॥

ಅಗಸ್ತ್ಯ ಮಹರ್ಷಿಗಳ ಸಲಹೆಯಂತೆ ಸೀತಾ ರಾಮ ಲಕ್ಷ್ಮಣರು ಪಂಚವಟಿಗೆ ಬಂದರು

( 32ನೇ ಪುಟ ನೋಡಿ )

ಶ್ರೀ ಶಂಕರಾಚಾರ್ಯರ

# ಮೋಹ ಮುದ್ಗರ

ನೆನೆ ಗೋವಿಂದನ ನೆನೆ ಗೋವಿಂದನ
ನೆನೆ ಗೋವಿಂದನ ಮತಿಹೀನ ।
ಹತ್ತಿರ ಹತ್ತಿರ ಬಂದಿರೆ ಮರಣ
ಕಾಯದು, ಕಾಯದು, ವ್ಯಾಕರಣ ॥ ೧ ॥

ಬಾಲ್ಯದೊಳಾಸಕ್ತನು ಆಟದಲಿ
ತಾರುಣ್ಯದಿ ತರುಣಿಯ ಮೋಹದಲಿ ।
ವೃದ್ಧಾಪ್ಯದಿ ನಾನಾ ಚಿಂತೆಯಲಿ
ಧ್ಯಾನವನಾರಿಡರೀಶನಲಿ ॥ ೨ ॥

ನರೆಗೂದಲ ತಲೆ, ಜರ್ಜರ ತನುವು
ಹಲ್ಲುಗಳೊಂದೂ ಇರದಿಹ ಮುಖವು ।
ಮುದುಕನು ನಡುಗುತ ಹಿಡಿವನು ದಂಡ
ಆದರೂ ಬಿಡನವನಾಶಾಪಿಂಡ ॥ ೩ ॥

ಅರುಣ ಸಂಧ್ಯೆಗಳು ರಾತ್ರಿಯು ಹಗಲು
ಶಿಶಿರ ವಸಂತಗಳುರುತಲಿಹವು ।
ಕಾಲನಾಟವಿದು ಸರಿವುದು ಆಯು
ಆದರೂ ಬಿಡನವನಾಶಾವಾಯು ॥ ೪ ॥

ಬೆಂಕಿಯು ಮುಂದಿರೆ ಸೂರ್ಯನು ಹಿಂದಿರೆ
ಇರುಳಲಿ ಗಡ್ಡವು ಮೊಳಕಾಲ್ಮಡುವಿರೆ।
ಕರದಡಿ ಭಿಕ್ಷೆಯು ಮರದಡಿ ವಾಸವು
ಹೀಗಿದ್ದರೂ ಬಿಡದಾಶಾಪಾಶವು ॥ ೫ ॥

ಹಗಲು ಇರುಳುಗಳು ಪಕ್ಷಮಾಸಗಳು
ಮರಳಿ ಮರಳಿ ಬಹವಯನ ವರ್ಷಗಳು
ವಸ್ತುಸ್ಥಿತಿಯು ಇಂತಿದ್ದರು ಆರೂ
ಆಸೆಯ ಪ್ರೇರಣೆಯನು ಬಿಡಲಾರರು ॥ ೬ ॥

ನೀನಾರ್, ನಾನಾರ್ ಬಂದೆಲ್ಲಿಂದ
ಜನನೀ ಜನಕರು ನನಗಾರೆಂದ ।
ಭಾವಿಪುದೆಲ್ಲವೂ ಅಸಾರವೆಂದು
ಬಿಡು ನೀ ಸ್ವಪ್ನ ವಿಕಾರವಿದೆಂದು ॥ ೭ ॥

ಅರೆಲೊ ನಿನ್ನಯ ಪುತ್ರಕಲತ್ರ
ಈ ಸಂಸಾರವು ಬಹಳ ವಿಚಿತ್ರ ।
ನೀನಾರಾರಿಗೆ ಬಂದೆಲ್ಲಿಂದ
ಭ್ರಾಂತನು ನೀ ನೀ ತತ್ತ್ವವನರಿಯೆಂದ ॥ ೮ ॥

ಜೀವವು ದೇಹದ ಒಳಗಿರುವರೆಗೆ
ಕುಶಲವ ಕೇಳುವರು ಮನೆಯವರವಗೆ ।
ಪ್ರಾಣ ಗತಿಸಿ ನೆಲಕುರುಳಲು ತನುವು
ಆ ದೇಹಕೆ ಭಯಪಡುವಳು ಸತಿಯು ॥ ೯ ॥

ರಮಣಿಯ ಮಾಯಾ ಮೋಹಾವೇಶ
ತೊಡೆಗಳ ಕುಚಗಳ ಮೋಹಕದೃಶ್ಯ ।
ನೆಣ ಮಾಂಸಗಳ ವಿಕಾರವಿದೆಂದು
ಮನದಲಿ ಚಿಂತಿಸು ನೀ ಎಂದೆಂದು ॥ ೧೦ ॥

ದುಡಿದೂ ದುಡಿದೂ ಗಳಿಸಿದ ಹಣದಿ
ನಿತ್ಯವು ಸುಖಪಡು ನಿನ್ನಯ ಮನದಿ ।
ಮೂಢನೆ ಬಿಡು ಧನಸಂಚಯ ದಾಹ
ಸುಖವೀಯದು ಅದು ತೀರದ ದಾಹ ॥ ೧೧ ॥

ಸುಖಿಸಲು ರಮಣಿಯ ಭೋಗಿಸಲಾಗ
ಅಂಟುವುದಯ್ಯಾ ! ತನುವಿಗೆ ರೋಗ ।
ಮರಣವೆ ಅಂತಿಮ ಗತಿಯಾಗಿದ್ದರು
ಪಾಪಾಚರಣೆಯ ತ್ಯಜಿಸರು ನರರು ॥೧೨॥

ಧನವನರ್ಥ ಕಾರಣವರಿ ನಿತ್ಯದಿ
ಸುಖವೆಳ್ಳಷ್ಟಿಲ್ಲದರೊಳು ಸತ್ಯದಿ ।
ಧನಿಕಗಿಹುದು ನಿಜ ಪುತ್ರರ ಭೀತಿ
ಇದು ಎಲ್ಲೆಲ್ಲಿಯೂ ನಡೆದಿಹ ರೀತಿ ॥೧೩॥

ಸಹಸ್ರನಾಮವ, ಗೀತೆಯ ಹಾಡು
ಅನುದಿನ ಶ್ರೀಪತಿ ಧ್ಯಾನವ ಮಾಡು ।
ತೊಡಗಿಸು ಸಜ್ಜನ ಸಂಗದಿ ಚಿತ್ತ
ಕೊಡು ಕೊಡು ದೀನ ದರಿದ್ರಗೆ ವಿತ್ತ ॥ ೧೪ ॥

ಕನ್ನಡಾನುವಾದ :
**ಶ್ರೀ ವೆಂಕಟರಾವ್‌ನಾಯಕ**

ಭಾರತೀಯ ತತ್ತ್ವಶಾಸ್ತ್ರದಲ್ಲಿ ಶಂಕರಾಚಾರ್ಯರ ಸ್ಥಾನ ಉನ್ನತೋನ್ನತವಾದದ್ದು. ಅದ್ವೈತ ಪ್ರತಿಪಾದಕರಾಗಿ ಅವರು ವಿಶ್ವದ ತತ್ತ್ವಶಾಸ್ತ್ರ ಚರಿತೆಯಲ್ಲಿ ತಮ್ಮದೇ ಹಿರಿಮೆ ಪಡೆದಿದ್ದಾರೆ. ಶಂಕರ ಜಯಂತಿಯಂದು ಈ ಮೋಹ ಮುದ್ಗರವನ್ನು ಕನ್ನಡದಲ್ಲಿ ಓದುಗರಿಗೆ ನೀಡುವುದಕ್ಕೆ ಸಪ್ತಗಿರಿ ಹರ್ಷಿಸುತ್ತದೆ.

ವೃದ್ಧನಿಗೆಲ್ಲಿಯ ಕಾಮವಿಕಾರ
ಜಲ ಬತ್ತಿರೆ ಎಂತಹ ಕಾಸಾರ ।
ವಿತ್ತಹೀನಗೆಲ್ಲಿಯ ಪರಿವಾರ
ತತ್ತ್ವವರಿತಗೆಲ್ಲಿಯ ಸಂಸಾರ ॥ ೧೫ ॥

ಹಣವನು ಗಳಿಸುತ್ತಿರುವನಕೆಲ್ಲರು
ಪ್ರೀತಿದೋರುವರು ನೆಂಟರು ಇಷ್ಟರು ।
ಮುಪ್ಪಿನ ಕಾಲಕೆ ಮಾತಾಡಿಸರು
ಆತನ ಮನೆಯಲಿ ಮನೆಯವರಾರೂ ॥ ೧೬ ॥

ಕಮಲದೆಲೆಯ ಮೇಲಿರುವ ನೀರಿನೊಲು
ಅಸ್ಥಿರವಾಗಿಹುದೈ ಜೀವನ ಬಲು ।
ಚಿಂತೆ ಶೋಕ ರೋಗಗಳಲಿ ಇಂದು
ತಿಳಿ ನೀ ಲೋಕವು ಮುಳುಗಿದೆಯೆಂದು ॥ ೧೭ ॥

ಮತ್ತೆಯು ಜನನ, ಮತ್ತೆಯು ಮರಣ
ಮತ್ತೆಯು ಜನನಿಯ ಉದರದಿ ಶಯನ ।
ಅಪಾರ ದುಸ್ತರ ಈ ಸಂಸಾರ
ಪರಮಕರುಣೆಯಲಿ ಪೊರೆಯೈ ಮುರಹರ ॥ ೧೮ ॥

ಕಾವಿಯನುಡುವುದು, ಜಡೆ ಧರಿಸುವುದು
ಬೋಳಿಸುವುದು, ಕೂದಲ ಕೀಳುವುದು ।
ಉದರ ಪೋಷಣೆಯ ವೇಷವಿದೆಲ್ಲ
ಮೂಢನು ಕಂಡರು ಕಾಣುವುದಿಲ್ಲ ॥ ೧೯ ॥

ಕಿಂಚಿದ್ಭಗವದ್ಗೀತಾ ಪಠಣ
ಗಂಗಾಜಲ ಬಿಂದುವಿನ ಪಾನ ।
ಮುರಾರಿಯರ್ಚನ ಮಾಡುವ ನರನ
ಮುಟ್ಟನು ಯಮನೆಂದೆಂದಿಗೂ ಅವನ ॥ ೨೦ ॥

ಗಂಗಾಸಾಗರ ಯಾತ್ರೆಗೆ ಹೋಗಲಿ
ವ್ರತವಾಚರಿಸಲಿ, ದಾನವನೀಡಲಿ ।
ದೊರಕದು ಮುಕ್ತಿಯು ಜ್ಞಾನವಿಹೀನಗೆ
ನೂರು ಜನುಮಗಳು ಕಳೆದರು ಅವನಿಗೆ ॥ ೨೧ ॥

ಕಾಮ ಕ್ರೋಧ ಭ್ರಮೆ ಲೋಭವ ತ್ಯಜಿಸು
ನಾನಾರೆಂಬುದ ಬಿಡದಲೆ ಭಾವಿಸು
ಆತ್ಮಜ್ಞಾನ ವಿಹೀನನು ಮೂಢನು
ನರಕ ಘೋರದಲಿ ಹೊರಳಾಡುವನು ॥೨೨॥

ಗಂಗಾತೀರದ ಮರದಡಿ ವಾಸವು
ಭೂಮಿಯ ಹಾಸಿಗೆ ಅಜಿನಾಂಬರವು ।
ಸರ್ವಪರಿಗ್ರಹಭೋಗದ ತ್ಯಾಗ
ಸುಖವಾರಿಗೆ ಕೊಡದಿಹುದು ವಿರಾಗ ॥೨೩॥

ಬೀದಿಯ ಚಿಂದಿಯ ಕೌದಿಯ ಹೊದೆಯೆ
ಪಾಪ ಪುಣ್ಯಗಳು ಇರದೆಡೆ ನಡೆಯೆ ।
ನಾನಿರೆ, ನೀನಿರೆ, ಇರದೀ ಲೋಕ
ಇಂತಿರೆ ಗೈಯುವುದೇತಕೆ ಶೋಕ ॥೨೪॥

ಯೋಗದೊಳಿರಲಿ, ಭೋಗದೊಳಿರಲಿ
ಜನರೊಳಿರಲಿ ಏಕಾಂತದೊಳಿರಲಿ ।
ಚಿತ್ತವನೀಶನಲಿಟ್ಟಿರುವವನು
ಸುಖಿಸುವ, ಸುಖಿಸುವ, ಸುಖಿಸುವನವನು ॥೨೫॥

ಧನಜನಯೌವನದಲಿ ಬಿಡು ಗರುವ
ಕಾಲನು ಕ್ಷಣದೊಳು ನುಂಗುವನೆಲ್ಲವ ।
ಮಾಯಾ ಮಯವಿದು ಸಕಲವು ಎನ್ನುತ
ಬ್ರಹ್ಮನೊಳಿರುತಿರು ನೀನದನರಿಯುತ ॥೨೬॥

ಸ್ತ್ರೀ ಧನ ಚಿಂತೆಯದೇತಕೆ ಮರುಳೆ
ದಾರಿಯ ತೋರಲು ನಿನಗಾರಿಲ್ಲೆ ?
ಸತ್ಸಹವಾಸದ ನೌಕೆಯು ತಾನು
ಭವಸಾಗರವನು ದಾಂಟಿಸದೇನು ? ॥೨೭॥

ನನ್ನೊಳು ನಿನ್ನೊಳು ಎಲ್ಲಿಯೂ ಓರ್ವನೆ
ಹರಿಯಿರೆ ಸಹಿಸದೆ ಮುನಿಯುವಿ ಸುಮ್ಮನೆ ।
ಎಲ್ಲರೊಳಗು ಪರಮಾತ್ಮನ ಕಾಣು
ಭೇದ ಭಾವಗಳ ಬಿಡು ಬಿಡು ನೀನು ॥೨೮॥

ಶತ್ರು ಮಿತ್ರಸುತ ಬಂಧುಗಳೆಂದು
ಸ್ನೇಹವೈರಗಳ ಬೆಳಸದಿರೆಂದೂ ।
ವಿಷ್ಣು ತತ್ತ್ವ ನೀ ತಿಳಿಯಬಯಸಿದೊಡೆ
ಸಮಚಿತ್ತವನೆ ತಳೆಯುವುದೆಲ್ಲೆಡೆ ॥೨೯॥

ಸತ್ಸಹವಾಸದಿ ನಿರ್ಲಿಪ್ತತೆಯು
ನಿರ್ಲಿಪ್ತತೆಯಿಂ ನಿರ್ಮೋಹತ್ವವು ।
ನಿರ್ಮೋಹತ್ವದಿ ನಿಶ್ಚಲ ಚಿತ್ತವು
ನಿಶ್ಚಲ ಚಿತ್ತದಿ ಜೀವನ್ಮುಕ್ತಿಯು ॥೩೦॥

ಪ್ರಾಣಾಯಾಮವ, ಪ್ರತ್ಯಾಹಾರವ
ನಿತ್ಯಾನಿತ್ಯ ವಿವೇಕ ವಿಚಾರವ ।
ಜಪಾದಿ ಧ್ಯಾನಸಮಾಧಿಯ ವಿಧಿ ನೀ
ಗಮನಿಸು ಬಹು ಎಚ್ಚರದಲಿ ನೀ ॥೩೧॥

ಭಕ್ತಿಲಿ ಗುರುಪದ ಕಮಲವ ನಂಬುತ
ಭವ ಬಂಧನದಿಂ ಮುಕ್ತನು ಆಗುತ ।
ಮನವಿಂದ್ರಿಯಗಳ ನಿಗ್ರಹಿಸಲು ನೀ
ಕಾಣುವಿ ಹೃದಯದೊಳಿಹ ದೇವನ ನೀ ॥೩೨॥

## ನಮ್ಮ ದೇವಸ್ಥಾನಗಳು



ಆಲಯ ವಿಮಾನ.

# ಶ್ರೀ ಕೋದಂಡ ರಾಮಸ್ವಾಮಿ ದೇವಾಲಯ

ಸಾಧಾರಣವಾಗಿ ತಿರುಪತಿಗೆ ಬರುವ ಯಾತ್ರಿಕ ಜನರು ಬೆಟ್ಟದಮೇಲೆ ಶ್ರೀನಿವಾಸನ ದರ್ಶನ ಮಾಡಿಕೊಂಡು, ತಿರುಪತಿಯಲ್ಲಿರುವ ಗೋವಿಂದರಾಜಸ್ವಾಮಿ ಸೇವೆ ಪೂರ್ತಿಮಾಡಿ ತಿರುಚಾನೂರಿನಲ್ಲಿರುವ ಅಲಮೇಲು ಮಂಗ ತಾಯಾರನ್ನು ಸೇವಿಸಿಕೊಂಡು ಊರಿಗೆ ಹಿಂತಿರುಗುತ್ತಾರೆ. ಇವಲ್ಲದೆ ತಿರುಪತಿಯಲ್ಲಿ ನೋಡಬೇಕಾಗಿರುವ ದೇವಸ್ಥಾನಗಳಲ್ಲಿ ಶ್ರೀಕೋದಂಡ ರಾಮಸ್ವಾಮಿ, ಶ್ರೀ ಕಪಿಲೇಶ್ವರಸ್ವಾಮಿ ದೇವಸ್ಥಾನಗಳನ್ನು ಹೆಸರಿಸಬಹುದು.

ಶ್ರೀಕೋದಂಡರಾಮಸ್ವಾಮಿ ದೇವಸ್ಥಾನವು ಅತ್ಯಂತ ಪ್ರಾಚೀನವೆಂದು ಕೆಲವರ ಅಭಿಪ್ರಾಯ. ಶ್ರೀರಾಮಚಂದ್ರಮೂರ್ತಿ ರಾವಣಸಂಹಾರಮಾಡಿ ಅಯೋಧ್ಯಾಪಟ್ಟಣಕ್ಕೆ ಹಿಂದಿರುಗುವ ವೇಳೆಯಲ್ಲಿ ಒಂದು ರಾತ್ರಿ ತಿರುಪತಿಯಲ್ಲಿ ವಿಶ್ರಮಿಸಿದನು. ಅದರ ಗುರುತಾಗಿ ಜಾಂಬವಂತನು ಈ ಆಲಯ ಪ್ರತಿಷ್ಠಾಪನೆ ಮಾಡಿದನೆಂದು ಐತಿಹ್ಯ. ಇದು ನಿಜವಾದರೆ ಈ ಮೂರ್ತಿ ತ್ರೇತಾಯುಗದಿಂದ ಪ್ರಸಿದ್ಧವೆಂದು ಹೇಳಬಹುದು. ಮತ್ತೊಂದು ಕಥೆಯ ಪ್ರಕಾರ ಜನಮೇಜಯ ಚಕ್ರವರ್ತಿ ಈ ಆಲಯದ ಜೀರ್ಣೋದ್ಧಾರ ಮಾಡಿಸಿದ್ದಾನೆ. ಇದು ಸತ್ಯವಾದರೆ ದ್ವಾಪರಯುಗದಿಂದ ಈ ವಿಗ್ರಹ ಜನಸೇವ್ಯವಾಯಿತು.

ಚಾರಿತ್ರಿಕ ದೃಷ್ಟಿಯಿಂದ ನೋಡಿದರೆ ಈ ಆಲಯವು ಸುಮಾರು ಐನೂರು ವರ್ಷಗಳಿಂದ ಬೆಳವಣಿಗೆ ಹೊಂದಿತೆಂದು ಹೇಳಬಹುದು. ಈ ದೇವಾಲಯದ ಪ್ರಾಕಾರದ ಗೋಡೆಗಳಲ್ಲಿ ಒಂದು ಶಾಸನವೂ ಇಲ್ಲ. ಒಂದು ಕಡೆ ವಿಜಯನಗರ ಚಕ್ರವರ್ತಿಗಳ ಚಿಹ್ನೆಗಳು ಮಾತ್ರ ಕಾಣಿಸುತ್ತವೆ. ಆದರೆ ಗೋವಿಂದ ರಾಜಸ್ವಾಮಿ ದೇವಾಲಯದ ಕುಡ್ಯಗಳಮೇಲೆ ಈ ಬಗ್ಗೆ ಸಾಕಷ್ಟು ಉಲ್ಲೇಖಗಳಿವೆ. ಅವುಗಳಿಂದ ವಿಜಯನಗರದ ಅರಸನಾದ ಸಾಳ್ವ ನರಸಿಂಹನಿಗಾಗಿ ಶಠಗೋಪ ದಾಸರು ಈ ದೇವಸ್ಥಾನವನ್ನು ಜೀರ್ಣೋದ್ಧಾರಮಾಡಿಸಿದರೆಂದು ತಿಳಿದುಬರುತ್ತದೆ. ಮತ್ತು ಕುಮಾರರಾಮಾನುಜ ಅಯ್ಯಂಗಾರ್ ಅಚ್ಯುತರಾಯನ ಸೌಭಾಗ್ಯಕ್ಕಾಗಿ ಕೋದಂಡರಾಮಸ್ವಾಮಿಗೆ ಒಂದು ದಾರುರಥವನ್ನು ನಿರ್ಮಿಸಿದನೆಂದು ತಿಳಿದು ಬರುತ್ತದೆ.

ಶ್ರೀಕೋದಂಡರಾಮಸ್ವಾಮಿ ಸೀತಾ ಲಕ್ಷ್ಮಣ ಸಮೇತನಾಗಿ ಗರ್ಭಗುಡಿಯಲ್ಲಿ ನಿಂತಿದ್ದಾನೆ. ಸ್ವಾಮಿ ಪಶ್ಚಿಮಾಭಿಮುಖನಾಗಿ ನಿಂತಿರುವುದು ಒಂದು ವಿಶೇಷ ಮತ್ತು ಸೀತಮ್ಮ ದಕ್ಷಿಣದಲ್ಲಿ ನಿಂತಿದ್ದಾಳೆ. ವೈಖಾನಸ ಆಗಮದ ಪ್ರಕಾರ "ಆತ್ಮನಃ ದಕ್ಷಿಣತೋ ಪತ್ನೀಂ ಸನ್ಯಸ್ಯ". ಬೆಟ್ಟದಮೇಲೆ ಶ್ರೀನಿವಾಸನ ದಕ್ಷಿಣವಕ್ಷಸ್ಥಲದಲ್ಲಿ ಲಕ್ಷ್ಮಿ ಇರುವುದು ಇದಕ್ಕೆ ಮತ್ತೊಂದು ಪ್ರಮಾಣ. ಇಂತಹ ಕ್ಷೇತ್ರಗಳು ಭಕ್ತರಿಗೆ ಭುಕ್ತಿಮುಕ್ತಿ ಪ್ರದಾಯಕವೆಂದು ವೈಖಾನಸರ ಹೇಳಿಕೆ.

ಡಾ॥ ಕೆ. ಸರ್ವೋತ್ತಮನ್

ಅನೇಕವಿಧವಾದ ಬಾಧೆಗಳನ್ನು ಹೊಂದಿ ಆಲಯಕ್ಕೆ ಬರುವ ಜನರಿಗೆ ತಾನು ರಕ್ಷಕನಾಗಿ ಇದ್ದೇನೆಂದು ಅಭಯಕೊಡುವ ರೀತಿ ಕೋದಂಡರಾಮನು 'ತ್ರಿಭಂಗ' ಆಕೃತಿಯಲ್ಲಿ ನಿಂತಿದ್ದಾನೆ.

ಈ ಆಲಯದಲ್ಲಿ ರಾಮಾನುಜ, ವಿಷ್ವಕ್ಸೇನ ಗರುಡ ವಿಗ್ರಹಗಳು ಕಾಣಿಸುತ್ತವೆ. ಆಲಯಕ್ಕೆ ಎದುರಾಗಿ ಆಂಜನೇಯಸ್ವಾಮಿ ವಿಗ್ರಹವೂ ಉಂಟು. ವಿಷ್ವಕ್ಸೇನ ಮಂದಿರದ ಮುಖಭಾಗದಲ್ಲಿ ವಿನಾಯಕ ಶಿಲ್ಪ



ಗರುಡವಾಹನನಾದ ಶ್ರೀ ಕೋದಂಡರಾಮಸ್ವಾಮಿ

ಕಾಣಿಸುತ್ತದೆ. ವಿಷ್ಣು ಆಲಯಗಳಲ್ಲಿ ವಿನಾಯಕ ಶಿಲ್ಪ ಇರುವುದು ಮತ್ತೊಂದು ವಿಶೇಷ.

ಕೋದಂಡರಾಮಸ್ವಾಮಿ ಅರ್ಚನೆ ಮಾಡುವವರು ವೈಖಾನಸರು. ಇವರು ನೆಲ್ಲೂರು ಜಿಲ್ಲೆಯ ಉದಯಗಿರಿಯಿಂದ ಬಂದವರು. ವೆಂಕಟರಮಣ, ಗೋವಿಂದರಾಜ, ಕೋದಂಡರಾಮಸ್ವಾಮಿ ದೇವಸ್ಥಾನಗಳಲ್ಲಿ ವೈಖಾನಸ ಆಗಮದ ಪ್ರಕಾರ ಸೇವಾ ಕೈಂಕರ್ಯಗಳು ನಡೆಯುತ್ತವೆ.

ಕೋದಂಡರಾಮಸ್ವಾಮಿಗೆ 'ಶನಿವಾರ' ಮುಖ್ಯ, ಆ ದಿನ ವಿಶೇಷ ಪೂಜೆಗಳು ನಡೆಯುತ್ತವೆ. ತಿಥಿಗಳಲ್ಲಿ ಅಮಾವಾಸ್ಯೆ, ಅಂದಿನ ದಿನದಲ್ಲಿ 'ಪೂಲಂಗಿಸೇವೆ' ಮಾಡುತ್ತಾರೆ. ಮಾಘಶುದ್ಧ ಏಕಾದಶಿಯದಿನ ಸ್ವಾಮಿಗೆ ತೆಪ್ಪೋತ್ಸವ ನಡೆಯುತ್ತದೆ. ಶ್ರೀರಾಮನವಮಿ ಉತ್ಸವಗಳಲ್ಲದೆ ಬ್ರಹ್ಮೋತ್ಸವವೂ ನಡೆಯುತ್ತದೆ. ಬ್ರಹ್ಮೋತ್ಸವದಲ್ಲಿ ಅಂಕುರಾರ್ಪಣ, ತಿರುಚ್ಚಿ ಉತ್ಸವ, ದೊಡ್ಡಶೇಷವಾಹನ, ಚಿಕ್ಕಶೇಷವಾಹನ, ಹಂಸವಾಹನ, ಸಿಂಹವಾಹನ, ಮುತ್ತಿನಪಲ್ಲಕ್ಕಿ, ಕಲ್ಪವೃಕ್ಷ, ಸರ್ವಭೂಪಾಲ, ಪಲ್ಲಕ್ಕಿಯಲ್ಲಿ ಮೋಹಿನೀ ಅವತಾರ, ಗರುಡವಾಹನ, ಹನುಮದ್ವಾಹನ ಗಜವಾಹನ, ಸೂರ್ಯಪ್ರಭ, ಚಂದ್ರಪ್ರಭ ವಾಹನಗಳು, ರಥೋತ್ಸವ, ಅಶ್ವವಾಹನಗಳು ಕ್ರಮವಾಗಿ ಹಗಲು ರಾತ್ರಿವೇಳೆಗಳಲ್ಲಿ ತಿರುಪತಿ ತಿರುಮಲೆ ದೇವಸ್ಥಾನದವರು ನಡೆಸುತ್ತಾರೆ.

ಕೋದಂಡರಾಮಸ್ವಾಮಿ ಸೇವೆ ಮಾಡಿ ಭಕ್ತಿಯಿಂದ ಹಾಡಿದವರು ಅನೇಕ ವಿದ್ವಾಂಸರು. ಅವರಲ್ಲಿ ತಾಳ್ಳಪಾಕ ಅನ್ನಮಾಚಾರ್ಯ, ಪೆದತಿರುಮಲಾಚಾರ್ಯ, ಚಿನ ತಿರುಮಲಾಚಾರ್ಯರು ಪ್ರಸಿದ್ಧರು. ಚಿನ ತಿರುಮಲಾಚಾರ್ಯನು ಹಾಡಿದ ಕೀರ್ತನೆ ನೋಡಿ—

ಮಾಳಗೌಳ:

" ಶ್ರೀಪತಿಪುರನಾಯಕಾ - ಜಯ
ಚಿಂತಿತಾಭೀಷ್ಟದಾಯಕಾ ॥ ಪಲ್ಲವಿ ॥

ಉನ್ನತೋನ್ನತ ವಿಗ್ರಹಾ
ದಾಸೋಪರಿಸ್ಥಾನುಗ್ರಹಾ
ಸನ್ನುತಾಮರ ಸುಗ್ರಹಾ
ಸಾಮಪದ ಪರಿಗ್ರಹಾ ॥ ಶ್ರೀಪತಿ ॥

ಜಾನಕೀಪ್ರಿಯ ಕಾರಕಾ - ಶಿವ
ಸಾಧಿತಾಖಿಲ ತಾರಕಾ
ಮಾನುಷಾಹಿತ ಮಾರಕಾ
ಮಾಮಕಾಘನಿವಾರಕಾ ॥ ಶ್ರೀಪತಿ ॥

ಶ್ರೀ ವೆಂಕಟನಾಥ ರೂಪಕಾ - ಸಂ
ಚಿತ ರಘುಕುಲ ದೀಪಕಾ
ಭಾವ ಸಂತೋಷ ಪ್ರಾಪಕಾ - ಅ
ಭಂಗ ಮಂಜುಲ ಚಾಪಕಾ ॥ ಶ್ರೀಪತಿ ॥

ತಿರುಪತಿಯಲ್ಲಿರುವ ಎಲ್ಲಾದೇವರಿಗೂ ಸುಪ್ರಭಾತ ಉಂಟು, ಕೋದಂಡರಾಮನಿಗೆ ಇಲ್ಲವೆಂದು ತಿಳಿದು 'ಶ್ರೀಕೋದಂಡರಾಮ ಸುಪ್ರಭಾತಮ್' ರಚಿಸಿದವರು ಡಾ॥ ಎಸ್. ಬಿ. ರಘುನಾಥಾಚಾರ್ಯರು. ರಾಮಾಯಣ ಸನ್ನಿವೇಶಗಳನ್ನು ಕ್ರಮವಾಗಿ ಜೋಡಿಸಿ ಸುಪ್ರಭಾತ ಹಾಡುವುದು ಈ ಕೃತಿ ವಿಶೇಷ.

ಶ್ರೀಮೈಥಿಲೀ ನವಕರಾಬ್ಜ
ನಿಷೇವ್ಯಮಾಣಾ
ಸೌಮಿತ್ರಿ ಮಾನಸ ಮನೋಹರ
ರಾಜಹಂಸಾ
ಶ್ರೀವಾಯುಪುತ್ರ ಹೃದಯಾಬ್ಜ
ಲಸದ್ದ್ವಿರೇಫಾ
ಕೋದಂಡರಾಮ ಚರಣಾ
ಶರಣಂ ಪ್ರಪದ್ಯೇ

———



# ಶ್ರೀ ಕೋದಂಡರಾಮಸ್ವಾಮಿ ಸುಪ್ರಭಾತ

ಕೌಸಲ್ಯಾ ಸುಪ್ರಜಾರಾಮ ! ಪೂರ್ವಾ
ಸಂಧ್ಯಾ ಪ್ರವರ್ತತೇ !
ಉತ್ತಿಷ್ಠ ! ನರಶಾರ್ದೂಲ ! ಕರ್ತವ್ಯಂ
ದೈವಮಾಹ್ನಿಕಂ ॥ 1

ಓ ಕೌಸಲ್ಯಾನಂದನ ! ಪುರುಷ ಶ್ರೇಷ್ಠ ! ಶ್ರೀರಾಮಚಂದ್ರ! ಮೂಡಲಿನಲ್ಲಿ ಬೆಳಗಾಗುತ್ತಿದೆ ದೈವಿಕವಾದ ಪ್ರಾತಃಕಾಲ ಕರ್ತವ್ಯಗಳನ್ನು ನಿರ್ವಹಿಸಬೇಕು. ನಿದ್ರೆಯಿಂದ ಎಚ್ಚರಗೊಳ್ಳು.

ಇದು ವಾಲ್ಮೀಕಿಯ ಹೃದ್ಯವಾದ ಪದ್ಯ. ಕೌಶಿಕನು ಗುಣಾಭಿರಾಮನಾದ ರಘುರಾಮನನ್ನು ಎಚ್ಚರಿಸಿದ ಸಂದರ್ಭದಲ್ಲಿನದು ಆದ್ದರಿಂದ ಈ ಸುಪ್ರಭಾತದಲ್ಲಿ ಈ ಪದ್ಯದ ಸ್ಥಾನ ಪ್ರಸಂಗೋಚಿತವಾದದ್ದು.

ತವಸುಪ್ರಭಾತಮವನೀತನೂಭವೇ
ಸ್ಮಿತಫುಲ್ಲ ಗಂಡಲಸದಾನನಾಂಬುಜೇ ।
ರಘುನಾಥ ಮಾನಸ ವಿಹಾರಿಣಿ ! ದ್ರುತಂ
ಶಯನಂ ಸಮುಜ್ಝ ! ಪರಿಪಾಲಯಾಶ್ರಿತಾನ್ ॥ –2–

ಕಿರುನಗೆ ಬೀರುವ ಕದಪಿನಿಂದ ಪ್ರಕಾಶಿಸುವ ಮುಖಪದ್ಮ ಹೊಂದಿ, ರಘುನಾಥನ ಮನಸ್ಸಿನಲ್ಲಿ ಯಾವಾಗ್ಲೂ ವಿಹರಿಸುವ ಓ ಭೂಮಿಸುತೆ! ಸೀತಾದೇವಿ ! ನಿನಗೆ ಸುಪ್ರಭಾತವಾಗಲಿ. ಇನ್ನು ತ್ವರೆಯಾಗಿ ಶಯ್ಯೆಯನ್ನು ಬಿಟ್ಟು, ಆಶ್ರಿತರಾದ ನಮ್ಮನ್ನು ಪರಿಪಾಲಿಸು.

ಸೀತೆ ಜಗನ್ಮಾತೆ. ಅವನೀ ತನೂಭವೆಯ ಆಶ್ರಯ ಬೆಂಬಲಗಳಿಲ್ಲದೆ ಭವಬಂಧನ ವಿಮುಕ್ತಿಯನ್ನು ಭಾವಿಸುವುದೂ ಅಸಂಭವ. ಆಕೆ ಆನಂದಮಯಿ. ಮುಗುಳುನಗೆಯ ಮುಖಾರವಿಂದದ ಆಕೆ ಕವಿಗೆ ಸಾಕ್ಷಾತ್ಕರಿಸಿದಳು. ರಘುನಾಥನ ಮನವೊಂದು ಮಾನಸ ಸರೋವರ. ಅಲ್ಲಿ ನಿತ್ಯ ವಿಹಾರ ಮಾಡುವ ರಾಜಹಂಸ ರಾಜರ್ಷಿಪುತ್ರಿಯಾದ ಈ ರಮಣೀಲಲಾಮೆ. ಆಕೆ ಆಶ್ರಿತರನ್ನು ಅನುಗ್ರಹಿಸಲು, ತನ್ನ ಒಡೆಯನಾದ ರಾಮಚಂದ್ರನಿಗೆ ಹೇಳಿ ಅನುಗ್ರಹಿಸುವಂತೆ ಮಾಡಲು ಮೊದಲು ಆಕೆಯನ್ನು ಎಚ್ಚರಗೊಳಿಸಬೇಕು. ಎಂತಲೇ ಕವಿ ಮೊದಲು ಆಕೆಗೆ ಸುಪ್ರಭಾತವನ್ನು ಹೇಳುತ್ತಿದ್ದಾನೆ.

ಸಾಯಂ ಪ್ರವಿಶ್ಯ ಮಕರಂದ ಪಿಪಾಸಯಾ ಯೇ
ಪದ್ಮಾನಿ ತ್ರತ ನಿಹಿತಾ ವಿಧಿನಾऽದ್ಯ
ಯಾವತ್
ಭೃಂಗಾ ಅಮೀ ನಿಗಮಝುಂಕೃತಿ
ಮಾಲಪಂತಿ
ಕೋದಂಡರಾಮ! ಭಗವಂಸ್ತವ ಸುಪ್ರಭಾತಂ
–3–

ಮಕರಂದ ಪಿಪಾಸೆಯಿಂದ ನಿನ್ನೆಯ ಸಂಜೆಯ ಹೊತ್ತಿನಲ್ಲಿ ಪದ್ಮಗಳನ್ನು ಸೇರಿ ಅವು ಮುಚ್ಚಿಕೊಂಡಾಗ ಈವರೆಗೆ! ಅಲ್ಲಿಯೇ ಬಂಧಿಸಲ್ಪಟ್ಟ ದುಂಬಿಗಳು ಈಗ ನಿರ್ಗಮನ ಝೇಂಕಾರ (ವೇದ ಮಂತ್ರಾನುಕರಣಶಬ್ದ) ಮಾಡುತ್ತಿವೆ ಓ ಕೋದಂಡರಾಮಸ್ವಾಮಿ ! ನಿನಗೆ ಸುಪ್ರಭಾತವಾಗಲಿ.

---

ಸಂಸ್ಕೃತ ಮೂಲ, ವ್ಯಾಖ್ಯಾನ

**ಡಾ॥ ಎಸ್. ಬಿ. ರಘುನಾಥಾಚಾರ್ಯ**

---

ಸೂರ್ಯನು ಪಡುವಲಕಡಲನ್ನು ಸೇರುತ್ತಿದ್ದಾನೆ. ದುಂಬಿಗಳು ಮಕರಂದವನ್ನು ಹೀರುವ ಆಸೆಯಿಂದ ಪದ್ಮಗಳಲ್ಲಿ ಸೇರಿ ಮಧುಪಾನ ಮಾಡುತ್ತಿರುವಲ್ಲಿ ಸೂರ್ಯ ಮುಳುಗಿದ್ದನ್ನು ಗಮನಿಸದಾದವು. ಕಮಲದಳಗಳು ಮುಚ್ಚಿಕೊಂಡವು. ಅಪರಾಧಿಗಳು ಸೆರೆಯಲ್ಲಿ ಸಿಕ್ಕಿ ಬೀಳುವಂತೆ ಬೆಳಗಿನವರೆಗೆ ದುಂಬಿಗಳು ಕಮಲದಳಗಳ ಒಳಗೇ ಸಿಕ್ಕಿಕೊಂಡವು. ದಿನಕರನ ದಿವ್ಯದರ್ಶನವಿಲ್ಲದೆ ವಿರಹಿಣಿಯಾದ ಕಮಲಿನಿ, ಉದಯಿಸುತ್ತಿರುವ ತನ್ನ ಪ್ರಿಯಕರನಿಗಾಗಿ ತನ್ನ ಅರವಿಂದ ನೇತ್ರಗಳನ್ನು ತುಸು ತುಸುವೇ ತೆರೆಯುತ್ತಿದ್ದಾಳೆ. ಅದೇ ಸಮಯದಲ್ಲಿ ಹೊರಬರುತ್ತಿರುವ ಭ್ರಮರಗಳು ವಿಮುಕ್ತರಾದ ಬಂಧಿತರಂತೆ ಬ್ರಹ್ಮಾನಂದ ಸ್ವೇಚ್ಛಾ ಸಂಚಾರ ಝುಂಕಾರವನ್ನು ಮಾಡುತ್ತಿವೆ ಅದು ಅಧ್ಯಯನ ಸಮಯದ ವೇದೋಚ್ಚಾರಣೆಯಂತೆ ಮಧುರವಾಗಿ ಕೇಳಿಬರುತ್ತಿವೆ· ನೀನೋ ಸಾಮಗಾನ ಪ್ರಿಯ. ಇನ್ನೂ ತಡವೇಕೆ! ಬೇಗೇಳಬೇಕೆಂಬುದು ಕವಿ ಹೃದಯ.

ದಾಸೀ ಗಣೈರನುಗತಾ ಜನನೀ ತವೇಯಂ
ನೂನಂ ಪ್ರಬೋಧಯಿತುಮೇತ್ಯ ಮುಖೇಂದು
ಶೋಭಾಮ್ ।
ಪಶ್ಯಂತ್ಯತಿಷ್ಠದಿವ ಕೋಸಲರಾಜಪುತ್ರೀ
ಕೋದಂಡರಾಮ ! ಭಗವಂಸ್ತವ
ಸುಪ್ರಭಾತಂ ॥ –4–

ದಾಸದಾಸೀಗಣವು ಹಿಂಬಾಲಿಸಿ ಬರಲು ನಿನ್ನ ತಾಯಿಯಾದ ಕೌಸಲ್ಯಾದೇವಿ ನಿನ್ನನ್ನು ನಿದ್ದೆಯಿಂದೆಬ್ಬಿಸಲು ಬಂದು, ನಿನ್ನ ಮುಖಚಂದ್ರ ಶೋಭೆಯನ್ನು ನೋಡುತ್ತ ಪರವಶಳಾಗಿ ಹಾಗೇ ನಿಂತುಬಿಟ್ಟಂತಿದೆ. ಶ್ರೀ ಕೋದಂಡರಾಮ ! ಸ್ವಾಮಿ ! ನಿನಗೆ ಸುಪ್ರಭಾತವಾಗಲಿ.

ಕೋಸಲರಾಜಪುತ್ರಿಯಾದ ಕೌಸಲ್ಯೆ ದಾಸದಾಸೀ ಜನರೊಂದಿಗೆ 'ನನ್ನ ರಾಮಭದ್ರನು ಇನ್ನೂ ನಿದ್ದೆಯಿಂದ ಏಳಲಿಲ್ಲವೇ' ಎಂದು ಎಚ್ಚರಿಸಲು ಆತನ ಮಂದಿರಕ್ಕೆ ಬಂದಳು. ನಿದ್ರಾ ಮುದ್ರಾಂಕಿತವಾದ ಆ ಸ್ವಾಮಿಯ ವದನಚಂದ್ರವಿಲಾಸವನ್ನು ನೋಡುತ್ತ ಮೈಮರೆತಳು. ಬಂದ ಕಾರ್ಯವನ್ನು ಮರೆತು ಹಾಗೇ ನಿಂತಿದ್ದಾಳೆ. ತನ್ನ ಮಗ ಜಗದೇಕ ಸುಂದರನೆಂಬ ಭಾವ ಆ ತಾಯಿಯ ಮುಖದಲ್ಲಿ ಕಾಣುತ್ತಿದೆ. ತಾನೆಷ್ಟು ಸೌಭಾಗ್ಯವತಿಯೋ ಎಂಬ ತೃಪ್ತ ಭಾವ ಆ ಹೃದಯದಲ್ಲಿದೆ ನಿಜ ! ಜಗದೇಕ ಶರಣ್ಯನನ್ನು ನೋಡಿ ತಾಯಿ ಹಾಗೆ ಭಾವಿಸುವುದು, ಬಂದ ಕಾರ್ಯವನ್ನು ಮರೆತು ನಿಲ್ಲುವುದು ಸಹಜವೇ ಆಗಿದೆ.

ಘೀಂಕಾರ ರಮ್ಯ ಇಹಭದ್ರಗಜಃ ಪ್ರತಸ್ಥೇ
ಶುದ್ಧೋರ್ಧ್ವ ಪುಂಡ್ರ ಪರಿಶೋಭಿತ
ಕುಂಭಸೀಮಾ
ಪೂರ್ಣೋದಕಕುಂಭಸಹಿತಾರ್ಚಕ
ಮಾನಯೇದ್ಯಃ
ಕೋದಂಡರಾಮ ! ಭಗವಂಸ್ತವ ಸುಪ್ರಭಾತಂ
–5–

ನಿನ್ನ ಭದ್ರಗಜವು ಊರ್ಧ್ವ ಪುಂಡ್ರಗಳಿಂದ ಶೋಭಿಸುತ್ತ, ಘೀಂಕಾರಮಾಡುತ್ತ ಸುಂದರವಾಗಿ ತೋರಿಬರುತ್ತಿದೆ. ಜಲಪೂರ್ಣಕುಂಭದಿಂದ ಪ್ರಕಾಶಿಸುತ್ತಿರುವ ಅರ್ಚಕರನ್ನು ಕರೆತರಲು ಹೊರಡುತ್ತಿದೆ. ಶ್ರೀ ಕೋದಂಡರಾಮ! ಸ್ವಾಮಿ! ನಿನಗೆ ಸುಪ್ರಭಾತವಾಗಲಿ.

ದೇವಾಲಯ ಪ್ರಾಂಗಣದಲ್ಲಿ ಭದ್ರಗಜವು ಸೊಂಡಿಲನ್ನೆತ್ತಿ ಘೀಂಕರಿಸುತ್ತಿದೆ. ಅದರ ಉನ್ನತ

ವಾದ ಕುಂಭಸ್ಥಲ ಊರ್ಧ್ವ ಪುಂಡ್ರಗಳಿಂದ ತುಂಬ ಆಕರ್ಷಕವಾಗಿ ಅಲಂಕರಿಸಲ್ಪಟ್ಟಿದೆ. ಕೈಂಕರ್ಯಕ್ಕಾಗಿ ಜಲಪೂರ್ಣಕುಂಭವನ್ನು ತರಲೆಂದು ಅರ್ಚಕರು ಪುಷ್ಕರಿಣಿಗೆ ಹೋಗಿದ್ದಾರೆ. ಸಕಲವಾದ್ಯ ವೈಭವದಿಂದ ಆ ಪವಿತ್ರತೀರ್ಥವನ್ನು ತರಲಿರಬಹುದು ಈಗ ಭದ್ರಗಜ ಹೊರಟಿದೆ; ಅವರನ್ನು ಕರೆತರಲು. ಗಜೈಶ್ವರ್ಯ ಸಂಪನ್ನನಾದ ನಮ್ಮ ಕೋದಂಡರಾಮಸ್ವಾಮಿಗೆ ಯಾರುತಾನೇ ಸಾಟಿ! ಅವನಿಗೆ ಅವನೇ ಸಮ!

ತ್ವಾಮದ್ಯ ಯಾಗಕರಣೋದ್ಯತ ಏಷ ಮೌನೀ
ಋಗ್ಭಿಃ ಪ್ರಬೋಧಯತಿ ಕೌಶಿಕ ಸಂಯಮೀಂದ್ರಃ
ಉತ್ತಿಷ್ಠ! ಪಾಲಯ! ಕೃಪಾಲಯ! ಸಾಧುಲೋಕಂ
ಕೋದಂಡರಾಮ! ಭಗಂಸ್ತವ ಸುಪ್ರಭಾತಂ
–6–

ಯೋಗಾನುಷ್ಠಾನಕ್ಕೆ ಸಿದ್ಧನಾದ ತಪೋಧನನಾದ ಈ ವಿಶ್ವಾಮಿತ್ರನು ಋಗ್ವೇದಮಂತ್ರಗಳಿಂದ ನಿನ್ನನ್ನು ಎಚ್ಚರಿಸುತ್ತಿದ್ದಾನೆ. ಓ! ಕೃಪಾಲಯಾ! ಏಳು ಸಜ್ಜನರನ್ನು ಪಾಲಿಸು. ಓ ಕೋದಂಡ ರಾಮಾ! ನಿನಗೆ ಸುಪ್ರಭಾತವಾಗಲಿ.

ರಾಮಚಂದ್ರನು ಜಗನ್ನಾಥ. ಸಜ್ಜನರನ್ನು ಸಂರಕ್ಷಿಸುವುದು ದುಷ್ಟರನ್ನು ದಂಡಿಸುವುದು ಧರ್ಮವನ್ನು ಧರೆಯಲ್ಲಿ ಪುನಃಪ್ರತಿಷ್ಠಾಪಿಸುವುದು ಆತನ ಅವತಾರಗಳಿಗೆ ಅತಿಮುಖ್ಯ ಲಕ್ಷಣಗಳು. ಇವುಗಳಿಗೆ ಎನಿತೋ ನೆಪಗಳು, ಇನ್ನೆನಿತೋ ಕಾರಣಗಳು. ಕೌಶಿಕನು ಮಹಾತಪಸ್ವಿ. ಯಾಗ ರಕ್ಷಣೆಗಾಗಿ ಶ್ರೀರಾಮನನ್ನು ಅರಣ್ಯಕ್ಕೆ ಕರೆದು ಕೊಂಡು ಹೋದ. ಅಂತಃಪುರದ ಅನಂತಭೋಗ ಗಳನ್ನನುಭವಿಸಬೇಕಾದ ರಾಜಕುಮಾರನು ಶೂನ್ಯಾಟವಿಯಲ್ಲಿ, ಶುದ್ಧ ನೀರಿನೊಂದಿಗೆ, ಶುಷ್ಕ ಪತ್ರಗಳ ನಡುವೆ ಕಾಲ ನೂಕುತ್ತಿದ್ದಾನೆ. ಸುಸ್ತಾಗಿ ನಿದ್ದೆ ಹೋಗುತ್ತಿದ್ದಾನೆ. ಆತ ನನ್ನು ಎಚ್ಚರಿಸುವ ಭಾಗ್ಯ ವಿಶ್ವಾಮಿತ್ರನದಾ ಯಿತು. ಪರಮಾತ್ಮತತ್ತ್ವವನ್ನು ಪ್ರತ್ಯಕ್ಷೀಕರಿಸಿ ಕೊಂಡ ಮಹರ್ಷಿಯಾದ ಕವಿ ಋಕ್ಕುಗಳಿಂದ ಸ್ತೋತ್ರಗಳಿಂದ ನಿದ್ರೆಯಿಂದ ಎಚ್ಚರಿಸುತ್ತಿದ್ದಾನೆ, ಅವತಾರಲಕ್ಷ್ಯವನ್ನು ನೆನಪಿಗೆ ತರುತ್ತಿದ್ದಾನೆ. ಎಂತಲೇ ವಿಶ್ವಾಮಿತ್ರನನ್ನು ಕವಿ "ಕೌಶಿಕ ಸಂಯ ಮೀಂದ್ರಃ" ಎನ್ನುತ್ತಿದ್ದಾನೆ. ಅಷ್ಟೇ ಅಲ್ಲ, "ಸಾಧುಲೋಕಂ" ಎನ್ನುವ ಮಾತಿನಲ್ಲಿ 'ಪರಿತ್ರಾ ಣಾಯ ಸಾಧೂನಾಂ' ಎನ್ನುವ ಭಗವದ್ವಾಕ್ಯ ವನ್ನು ಸ್ಮರಣೆಗೆ ತರುತ್ತಾನೆ. ಸಾಧುಲೋಕ ಪರಿಪಾಲನೆ ಅವತಾರೋದ್ದೇಶಗಳಲ್ಲಿ ಸರ್ವ ಪ್ರಧಾನ ಅಲ್ಲವೇ!

ಉದ್ಯಾನ ಮಂಟಪಗತಾ ನವಪುಷ್ಪವಲ್ಲೀ
ಸಾ ಮಾಲತೀ ಕಿರತಿ ಪುಷ್ಪಚಯಂ ಸಮಂತಾತ್।
ಯಾ ಸ್ವಾಗತಂ ವದತಿ ಕೀರವಚೋಮಿಷೇಣ
ಕೋದಂಡರಾಮ! ಭಗವಂಸ್ತವ ಸುಪ್ರಭಾತಂ ॥ –7–

ಗಿಳಿಗಳ ಉಲಿಯುನೆಪದಿಂದ ಸ್ವಾಗತ ಹೇಳುತ್ತ, ಹೊಸ ಕುಸುಮಗಳಿಂದ ಶೋಭಿಸುತ್ತ ಉದ್ಯಾನ ವನದಲ್ಲಿರುವ ಮಾಲತೀಲತೆ ನೀನು ಎಚ್ಚರ ಗೊಂಡು ಆಕಡೆ ಬರಬಹುದೆಂದು ಹೂಗಳನ್ನೆಲ್ಲಾ ಹರಡಿಕೊಂಡಿದೆ. ಓ ಕೋದಂಡರಾಮಾ! ಸ್ವಾಮೀ! ನಿನಗೆ ಸುಪ್ರಭಾತವಾಗಲಿ.

ಭಾವದ ಅಭಿವ್ಯಕ್ತಿಗೆ ಭಾಷೆ ಪ್ರಮುಖವಾದ ಸಾಧನ. ಮಾತು ತಿಳಿಯದವರು ಸಂಜ್ಞೆಗಳಿಂದ ತಮ್ಮ ಭಾವವನ್ನು ಇತರರಿಗೆ ತಿಳಿಸುತ್ತಾರೆ.



ರಾಮಸಂದರ್ಶನಕ್ಕಾಗಿ ಮಾಲತೀಲತೆ ಅರಳಿದ ಹೂಗಳನ್ನು ಹೊಂದಿ ಮೈಯೆಲ್ಲ ಕಣ್ಣಾಗಿ ನೋಡು ವಂತಿದೆ. ನಿದ್ದೆ ತಿಳಿದೆದ್ದ ಸ್ವಾಮಿ ತನ್ನನ್ನು ನೋಡಲು ಬರುವನೆಂದು ಮಂಟಪದತುಂಬ ಹೂ ಗಳನ್ನು ಚೆಲ್ಲಿದೆ. ಗಿಳಿಯ ಮಾತುಗಳೆಂಬ ನೆಪ ದಿಂದ 'ರಾಮಾ ನಿನಗೆ ಸ್ವಾಗತ' ಎಂದು ಸ್ವಾಗತ ವಚನವನ್ನು ಹೇಳುತ್ತಿದೆ. ಚೇತನಾಚೇತನಗಳು ಸ್ವಾಮಿ ನಿದ್ದೆ ಎದ್ದಲ್ಲಿ ಆತನನ್ನು ಸಂದರ್ಶಿಸಲು ಸಮಾಕಾಂಕ್ಷೆಯಿಂದ ಕೂಡಿವೆ. ಬೆಳಗಾಗುವ ಹೊತ್ತಿಗೆ ಲತೆಗಳಲ್ಲಿ ಹೂವರಳುವುದು ಲತಾ ಮಂಟಪಗಳಲ್ಲಿ ಗಿಳಿಗಳು ಅಭ್ಯಾಸವಶದಿಂದ ಹಲವು ಮಾತುಗಳನ್ನು ಹೇಳುವುದು ಎನ್ನುವ ಅಂಶಗಳು ಈ ಅನಲ್ಪಕಲ್ಪನಾಲತೆಗೆ ಆಧಾರ.

ಕನ್ಯಾಸ್ವಯಂವರಮಿಹೈವ ಭವಿಷ್ಯತೀವ
ಸಜ್ಜೀ ಕರೋತಿ ಜನಕೋ ನಿಖಿಲಂ ತದಂಗಮ್
ಉತ್ತಿಷ್ಠ ಶೌರ್ಯಮುಪದರ್ಶ್ಯ ವೃಣೀಷ್ವ ಸೀತಾಂ
ಕೋದಂಡರಾಮ! ಭಗವಂಸ್ತವ ಸುಪ್ರಭಾತಂ
–8–

ಇಲ್ಲಿಯೇ ಸೀತಾಸ್ವಯಂವರ ನಡೆಯುವಂತಿದೆ. ಜನಕ ಮಹಾರಾಜನು ಅದಕ್ಕೆ ತಕ್ಕ ಏರ್ಪಾಡನ್ನು ಮಾಡುತ್ತಿದ್ದಾನೆ. ನಿದ್ದೆಯಿಂದೆದ್ದು ನೀ ಸಾಮರ್ಥ್ಯ ವನ್ನು ಪ್ರದರ್ಶಿಸಿ ಸೀತಾದೇವಿಯನ್ನು ವರಿಸು ವಂತಹವನಾಗು. ಓ ಕೋದಂಡರಾಮಾ! ಸ್ವಾಮೀ! ನಿನಗೆ ಸುಪ್ರಭಾತವಾಗಲಿ.

ನಾರಾಯಣನೇ ಶ್ರೀರಾಮನಾಗಿ ಅವತರಿಸಿ ದನು. ನಿತ್ಯಾನಪಾಯಿನಿಯಾದ ಲಕ್ಷ್ಮಿ ಭೂಮಿ ಸುತೆಯಾಗಿ ಸೀತೆಯಾಗಿ ಜನಕನ ಮನೆಯಲ್ಲಿ ಬೆಳೆಯುತ್ತಿದ್ದಾಳೆ. ಯುಕ್ತ ವಯಸ್ಸು ಬಂದಿತು ಆ ರಾಜನ್ಯವರನು ವರಾನ್ವೇಷಣೆಗೆಂದು ಸ್ವಯಂ ವರವನ್ನು ಪ್ರಕಟಿಸಿದನು. ಮುಕ್ಕಣ್ಣನ ಬಿಲ್ಲಿಗೆ ಹೆದೆಯೇರಿಸುವುದು ಸ್ವಯಂವರ ಶುಲ್ಕ. ಜನಕನ ಆಹ್ವಾನದಂತೆ ವಿಶ್ವಾಮಿತ್ರನು ರಾಮಲಕ್ಷ್ಮಣ ರನ್ನು ಕರೆದುಕೊಂಡು ಬಂದಿದ್ದಾನೆ. ಇದು ಸೀತಾ ಸ್ವಯಂವರ ಪರ್ವದಿನ. ಶಿವಧನುರ್ಭಂಗ ನಡೆಯು ತ್ತದೆ. ಈಗ ರಾಮಚಂದ್ರನು ನಿದ್ದೆಯಿಂದೆದ್ದು ತನ್ನ ಪರಾಕ್ರಮವನ್ನು ಪ್ರದರ್ಶಿಸುತ್ತಾನೆ. ಲೋಕ ಕಲ್ಯಾಣಕ್ಕೆ ಸೀತಾಕಲ್ಯಾಣ ನಾಂದಿವಾಕ್ಯ. ದುಷ್ಟ ಶಿಕ್ಷಣಕ್ಕೆ ಇದು ಸ್ವಾಗತ ವಾಕ್ಯ. ಇಷ್ಟೊಂದು ಕೆಲಸವನ್ನಿಟ್ಟುಕೊಂಡು ಹೀಗೆ ನಿದ್ರಿ ಸಿದರೆ ಹೇಗೆ? ಎಂಬುದೇ ಕವಿಯ ಇಲ್ಲಿನ ಕಾತರ.

ತ್ವಾಂ ರಾಮಚಂದ್ರಮುಪಲಕ್ಷ್ಯ ವಿಹೀನ ಕಾಂತಿಃ
ಚಂದ್ರೋsಸ್ತಮೇತಿ ನನು ಕೇವಲ ಏವನೂನಮ್
ಪದ್ಮೇಕ್ಷಣೋ ಯದಿ ಜಹೀಹಿ! ವಿನಿದ್ರ! ತಲ್ಪಂ
ಕೋದಂಡರಾಮ! ಭಗವಂಸ್ತವ ಸುಪ್ರಭಾತಂ
–9–

ರಾಮಚಂದ್ರನಾದ ನಿನ್ನನ್ನು ಕಂಡು ಚಂದ್ರನು ವಿವರ್ಣವದನನಾಗಿ ಅಸ್ತಮಿಸುತ್ತಿದ್ದಾನೆ. ನೀನು ಪದ್ಮಾಕ್ಷನಾಗಿರುವುದಾದರೆ ಇನ್ನು ಹಾಸಿಗೆ ಯನ್ನು ಬಿಡು. ಓ ವಿನಿದ್ರಾ! ಕೋದಂಡರಾಮಾ! ಸ್ವಾಮಿ! ನಿನಗೆ ಸುಪ್ರಭಾತವಾಗಲಿ.

ಈ ಲೋಕದಲ್ಲಿ ಬಳ್ಳಿದನ ಮುಂದೆ ಬಡವನೆಂದೂ ಶೋಭಿಸಲಾರ. ಅನೇಕ ವಿಶೇಷಗಳಿಂದ ಅರಳಿದ ವಿಶಿಷ್ಟ ವಸ್ತುವಿನ ಮುಂದೆ ನಿರ್ವಿಶೇಷವಾದ ಶುದ್ಧ ವಸ್ತುವೂ ಸಹ ಅಷ್ಟೆ. ಇದು ನಿತ್ಯ ಸತ್ಯ. ನೋಡಿ; ಶ್ರೀರಾಮಚಂದ್ರನು ಅತಿಕ್ರಾಂತ ಮದನಸುಂದರ. ಸಕಲಜನ ನಯನಾಭಿರಾಮ. ಇತ್ತ ಚಂದ್ರನೋ ಬರೇ ಚಂದ್ರನಷ್ಟೆ. ಕಲೆಗಳ ಏರುಪೇರುಗಳ ನಡುವೆ ಸಿಕ್ಕಿ ತೊಳಲಾಡುವವನು. ರಾಹುಕೇತು ಗಳ ಪೀಡನೆಗೆ ಗುರಿಯಾಗಿ ರಮಣೀಯತೆಯನ್ನು ಕಳೆದು ಕೊಳ್ಳುತ್ತಿದ್ದಾನೆ. ಸೌಂದರ್ಯ ಸ್ಪರ್ಧೆ

ಯಲ್ಲಿ ಶ್ರೀರಾಮಚಂದ್ರನೊಂದಿಗೆ ಹೇಗೆ ನಿಲ್ಲಬಲ್ಲ? ಪರಾಜಿತನಾಗಿ ಅವಮಾನಭಾರದಿಂದ ಬಿಳಿಚಿದ ಮುಖದಿಂದ ಬದುಕಲಾಗದೆಂದೋ ಏನೋ ಆತ್ಮ ಹತ್ಯೆ ಮಾಡಿಕೊಳ್ಳುತ್ತಿದ್ದಾನೆ, ಅಸ್ತಮಿಸುತ್ತಿದ್ದಾನೆ. ಅವಮಾನಭಾರವನ್ನು ಹೊರಲಾರದವರು ಬೇರೆ ಏನು ತಾನೇ ಮಾಡಲು ಸಾಧ್ಯ.

ಚಂದ್ರನು ಮುಳುಗಿದ ಸೂರ್ಯ ಉದಯಿಸುತ್ತಿದ್ದಾನೆ. ಇನ್ನು ಪದ್ಮಿನಿ ಅರಳಿ ತನ್ನ ಸುಮನಯನಗಳನ್ನು ತೆರೆಯಬೇಕು. ಕಮಲಾಪ್ತನ ಪ್ರಕಾಶದಿಂದ ಕಮಲಗಳು ವಿಕಸಿಸುತ್ತವೆ ಎಂಬ ಕವಿಸಮಯ ಕವಿಯ ಹೃದಯದಲ್ಲಿದೆ ಎಂತಲೇ ನೀನು ಪದ್ಮಾಕ್ಷನಾದಲ್ಲಿ ಇನ್ನು ಹಾಸಿಗೆಯನ್ನು ಬಿಡು ಎನ್ನುತ್ತಾನೆ. ಆತ ತನ್ನ ಮಾಯೆಯಿಂದ ಲೋಕಗಳನ್ನು ನಿದ್ದೆಗೊಳಗಾಗಿಸುವವನು. ಆತನಿಗೆ ನಿದ್ದೆ ಎಂತಹದ್ದು ? ಎಂತಲೇ 'ವಿನಿದ್ರಾ' ಎನ್ನುತ್ತಿದ್ದಾನೆ.



ಸೀತಾಪವಿತ್ರರಮಣೀಯ ಪದಾಬ್ಜಲಾಕ್ಷಾ
ಮುದ್ರಾಂಚಿತಂ ಸಮುಪದರ್ಶಯ!
ದಿವ್ಯವಕ್ಷಃ!
ಪಶ್ಯಾಮ್ಯಹಂ ತು ಮಧುರಸ್ಮಿತ ಫುಲ್ಲಗಂಡಂ
ಕೋದಂಡರಾಮ! ಭಗವಂಸ್ತವ ಸುಪ್ರಭಾತಂ
–10–

ಪರಮಪುನೀತಳಾದ ಸೀತಾದೇವಿ ಪಾದಲಾಕ್ಷಾರಸ ಮುದ್ರೆಯಿಂದ ಪ್ರಕಾಶಿಸುವ ನಿನ್ನ ದಿವ್ಯ ವಕ್ಷಸ್ಥಲ ದರ್ಶನವನ್ನು ನೀಡುವಂತಹವನಾಗು. ನಿನ್ನ ಮಧುರಮಂದಸ್ಮಿತ ವಿಕಸಿತವಾದ ಗಂಡಸ್ಥಲವನ್ನು ನಾನು ನೋಡಬಯಸುವೆ. ಓ ಕೋದಂಡರಾಮ! ಸ್ವಾಮಿ! ನಿನಗೆ ಸುಪ್ರಭಾತವಾಗಲಿ.

ಭಗವಂತನನ್ನು ಬಹುವಿಧವಾಗಿ ಸೇವಿಸುವುದು ಭಕ್ತನ ಲಕ್ಷ್ಯ. ಲೌಕಿಕ ವಿಷಯಗಳಿಂದ ತನ್ನ ಮನವನ್ನು ಆಧ್ಯಾತ್ಮಿಕ ಪಥಕ್ಕೆ ತಿರುಗಿಸಲು ಆತ ಅನೇಕ ರೀತಿಗಳನ್ನವಲಂಬಿಸಿದ್ದಾನೆ. ಅವುಗಳಲ್ಲಿ ಲೌಕಿಕ ಜೀವನ ಸಂಘಟನೆಗಳನ್ನು ಭಗವಂತನಲ್ಲಿ ಭಾವಿಸಿ ತನ್ನ ಮನವನ್ನು ಆತನಿಗೆ ಸನ್ನಿಹಿತಗೊಳಿಸುವುದೂ ಒಂದು. ಸ್ವಾಮಿ ನಿದ್ದೆ ಮಾಡುತ್ತಿರುವನು. ಆತನ ವಿಶಾಲ ವಕ್ಷದ ಮೇಲೆ ಯಾವುದೋ ಅರುಣಮುದ್ರೆ ಕಂಡೂ ಕಾಣದಂತಿದೆ. ಅದಾವುದು ? ರಾತ್ರಿ ಪ್ರಣಯ ಕಲಹದಲ್ಲಿ ಉಂಟಾದ ಪಾದಮುದ್ರೆ. ಅಹಾ ! ಪಾದಮುದ್ರೆಯಿಂದ ವಕ್ಷಸ್ಥಲ ಎಷ್ಟು ಪರಿಶೋಭಿಸುತ್ತಿದೆ. ಹೌದು! ಅದು ಮೂರು ಲೋಕಗಳಿಗೂ ಪವಿತ್ರವಾದದ್ದು. ಮೃದುಲ ಸುಕುಮಾರವಾಗಿ ರಮಣೀಯವಾದದ್ದು. ಅರವಿಂದವನ್ನು ಧಿಕ್ಕರಿಸುವಂತದ್ದು. ಆತನ ಅವನೀಜಾತೆ ಸೀತೆ ಪಾದಗಳಿಗೆ ಹಚ್ಚಿಕೊಂಡ ಗೋರಂಟಿ ರಸದ ಮುದ್ರೆ. ಅದಕ್ಕಿಂತ ಸುಂದರವಾದದ್ದು ಬೇರೆನಿರಲು ಸಾಧ್ಯ ? ನಿದ್ದೆ ತಿಳಿದೆದ್ದು ಅಂತಹ ಎಡೆಯನ್ನು ನಾವು ನೋಡುವ ಭಾಗ್ಯವನ್ನುಂಟುಮಾಡು ಎನ್ನುತ್ತಿದ್ದಾನೆ ಭಕ್ತ, ಅಷ್ಟೇ ಅಲ್ಲ, ಇನ್ನೂ ಒಂದು ಲಾಭವಿದೆ. ಅದೆಂದರೆ ಕಣ್ಣಿಗೆ ಹಬ್ಬವಾಗುವಂತೆ ಮಧುರ ಮಂದಸ್ಮಿತವಾದ ಶ್ರೀರಾಮನ ಕದಪುಗಳನ್ನು ನೋಡುವಿಕೆ. ಅದು ನಿದ್ದೆ ತಿಳಿದೆದ್ದರೆ ಮಾತ್ರಸಾಧ್ಯ. ಹಾಗಾಗಿ ಇನ್ನು ಏಳದೆ ತಪ್ಪದು ಎನ್ನುತ್ತಿದ್ದಾನೆ. ಭಾವಸಾಮಯವಾದೀ ವಿಶ್ವದಲ್ಲಿ ಭಕ್ತನ ಭಾವನೆಗಳೆಲ್ಲ ಭಗವನ್ಮಯ.

ಮಂದಂ ಪ್ರವಾತಿ ಮಲಯಾನಿಲ
ಏಷ ಭಕ್ತ್ಯಾ
ಸಜ್ಜಃ ಪ್ರಯಾತು ಮಿಹ ಪಕ್ಷಿಚಯಃ ಪ್ರಶಸ್ತಃ
ತವದರ್ಶನಾರ್ಥಮಿವ ಭಕ್ತ ಜನಾಸ್ತ್ವರನ್ತೇ
ಕೋದಂಡರಾಮ ಭಗವಂಸ್ತವ
ಸುಪ್ರಭಾತಮ್ –11–

ನಿನ್ನಲ್ಲಿರುವ ಭಕ್ತಿಯಿಂದಲೆಂಬಂತೆ ಮಲಯಾನಿಲವು ಮಂದವಾಗಿ ಬೀಸುತ್ತಿದೆ ಪಕ್ಷಿಗಳು ಆಹಾರಕ್ಕಾಗಿ ಹೊರಡಲು ಸಿದ್ಧವಾಗಿವೆ. ಭಕ್ತಜನರೆಲ್ಲ ನಿನ್ನ ದರ್ಶನಕ್ಕಾಗಿ ಕಾತರರಾಗಿದ್ದಾರೆ. ಓ ಕೋದಂಡರಾಮಾ! ಸ್ವಾಮಿ! ನಿನಗೆ ಸುಪ್ರಭಾತವಾಗಲಿ.

ಬೆಳಗಾಗುತ್ತಿರುವ ಮುಂಚೆ ಬಿಸಿಲುಗಾಲದಲ್ಲೂ ಮಲಯಾನಿಲ ಬೀಸುತ್ತದೆ. ಅದು ಮಂದ ಮಂದವಾಗಿ ಬೀಸುವುದನ್ನು ಅನುಭವಿಸುತ್ತಿದ್ದರೆ, ಸ್ವಾಮಿಯ ಬಗೆಗಿನ ಭಕ್ತಿ ಪ್ರಪತ್ತಿಗಳಿಂದಲೇ ಹಾಗೆ ಬೀಸುತ್ತಿದೆ ಎನ್ನಬಹುದು. ರಾಮಭದ್ರನಿಗೆ ನಿದ್ರಾಭಂಗವಾಗಬಾರದೆಂದು ವಾಯದೇವನು ಮೆಲ್ಲ ಮೆಲ್ಲನೆ ಸಂಚರಿಸುತ್ತಿದ್ದಾನೆ. ತನ್ನ ಪುತ್ರನ ಆರಾಧ್ಯದೈವ, ಜಗತ್ಕಾರಣನಾದ ಶ್ರೀರಾಮಚಂದ್ರನನ್ನು ಆತ ಹಾಗೆ ಸೇವಿಸುವುದು ಸಮುಚಿತ. ಪಕ್ಷಿಗಳು ತಮ್ಮ ಗೂಡುಗಳನ್ನು ಬಿಟ್ಟು ಹೊರಡುವ ಸಮಯವಾಯಿತು ಹಕ್ಕಿಗಳು ಗೂಡುಗಳಲ್ಲಿ ಕೂಗುತ್ತಿವೆ. ಅವುಗಳನ್ನು ಬಿಟ್ಟು ಹೊರಡಬೇಕೆ ಎಂಬ ಹಿರಿ ಹಕ್ಕಿಗಳ ಕಾತರ. ಭಕ್ತಜನರು ಸ್ನಾನಾದಿಗಳನ್ನು ಮುಗಿಸಿ ಉಚಿತ ವೇಷದಿಂದ ದಿವ್ಯ ಸುಂದರ ಮೂರ್ತಿಯನ್ನು ದರ್ಶಿಸಲು ಉತ್ಸಾಹದಿಂದ ಬಂದಿದ್ದಾರೆ. ಭಕ್ತ ಪರಾಧೀನನು ಮತ್ತೂ ಆಲಸ್ಯ ಮಾಡಿದರೆ ಹೇಗೆ? ಬೇಗ ಏಳಬೇಕೆಂಬುದು ಕವಿಭಾವನೆ

ತ್ವಾಂ ಜಾನಕೀಪತಿಮವಾಪ್ಯ ಧನುಸ್ತ್ವದೇದಂ
ಕೋದಂಡ ಇತ್ಯಾದಿಜಗಾಮ ಖಲು
ಪ್ರತಿಷ್ಠಾಮ್।
ಉತ್ತಿಷ್ಠ ! ತತ್ಪ್ರಥಯ ! ಕುತ್ಸಿತದಂಡನೇನ
ಕೋದಂಡ ರಾಮ ಭಗವಂಸ್ತವ
ಸುಪ್ರಭಾತಮ್॥ –12–

ಜಾನಕೀ ಪತಿಯಾದ ನಿನ್ನನ್ನು ಸೇರಿ ಈ ಧನಸ್ಸು ಕೋದಂಡವೆಂದು ಪ್ರತಿಷ್ಠೆಯನ್ನು ಪಡೆಯಿತಲ್ಲವೇ ! ನಿದ್ದೆ ತಿಳಿದೆದ್ದು ಕುತ್ಸಿತರನ್ನು ದಂಡಿಸಿ ಅದನ್ನು ಸಾರ್ಥಕ ಗೊಳಿಸು. ಓ ಕೋದಂಡ ರಾಮಾ ! ಸ್ವಾಮಿ ! ನಿನಗೆ ಸುಪ್ರಭಾತವಾಗಲಿ.

ಹಲವಸ್ತುಗಳು ಹಲವರ ಬಳಿಯಿದ್ದಾಗಲೇ ತಮ್ಮ ಹೆಸರನ್ನು ಸುಸಂಗತಗೊಳಿಸಿ ಕೊಳ್ಳಬಲ್ಲವು, ಪ್ರಸಿದ್ಧಿ ಹೊಂದಬಲ್ಲವು. ಅನರ್ಹರ ಬಳಿ ಸೇರಿದಾಗ ಹೆಸರು, ಹೊಗಳಿಕೆಗಳು ಸರಿ ಹೊಂದವು. ಅಷ್ಟೇ ಅಲ್ಲ; ತಮ್ಮ ಹೆಸರಿಗೂ ಅನರ್ಹವಾಗುತ್ತವೆ. ಇಲ್ಲಿ ನೋಡಿ; ಬಿಲ್ಲಿಗೆ

ಕೋದಂಡ ವೆಂದೂ ಹೆಸರುಂಟು. ಅದು ಜಾನಕೀ ಜಾನಿಯಾದ ಶ್ರೀರಾಮನ ಆಶ್ರಯದಿಂದ ಅನ್ವರ್ಥವಾಯಿತು. ಕುತ್ಸಿತರನ್ನು ದಂಡಿಸುವುದರಿಂದಲ್ಲವೇ ಕೋದಂಡವಾಗುವುದು (ಕುತ್ಸಿತಾನ್ ದಂಡಯತೀತಿ ಕೋದಂಡಃ) ಜಾನಕಿಯನ್ನು ವಿವಾಹವಾಗುವುದರಿಂದ ರಾಮನಿಗೆ ಅರಣ್ಯಗಳಲ್ಲಿ ಅಲೆಯುತ್ತ ಅಸಂಖ್ಯ ರಾಕ್ಷಸರನ್ನು ಅಂತಗೊಳಿಸುವ ಅವಕಾಶವುಂಟಾಯಿತು. ಕುತ್ಸಿತರನ್ನು ದಂಡಿಸದೆ ನಿದ್ದೆ ಹೋದರೆ ಅವತಾರ ಪ್ರಯೋಜನ ಸಿದ್ಧಿಸದು. ಧನುವಿಗೆ ಕೋದಂಡ ಎಂಬ ಹೆಸರೂ ನಿರರ್ಥಕವಾಗುವುದು. " ಹೆಸರೇ ಕೋದಂಡರಾಮ ಆದ್ದರಿಂದ ನಿದ್ದೆ ತಿಳಿದೆದ್ದು ಅದರ ಪ್ರಸಿದ್ಧಿಯನ್ನೂ, ಭಕ್ತರನ್ನೂ ಕಾಪಾಡುವ ಸಮಯ ಆಸನ್ನವಾಗಿದೆ " ಎಂಬುದು ಕವಿಯ ಭಾವ.

ವಂದಾರು ಪಾಲನ ವಿಧೌ ಖಲು ನಿರ್ವಿರಾಮಃ
ರಾತ್ರೌ ಯದಾ ಸಮುಗಮಶ್ಶಯನಂ
ನಜಾನೇ।
ಕರ್ತವ್ಯ ಪಾಲನ ಕೃತೇಽದ್ಯ
ಸಮುಜ್ಝ! ಶಯ್ಯಾಂ
ಕೋದಂಡರಾಮ! ಭಗವಂಸ್ತವ
ಸುಪ್ರಭಾತಂ –13–

ಶರಣಾಗತರನ್ನು ರಕ್ಷಿಸುವಲ್ಲಿ ವಿಶ್ರಾಂತಿಯಿಲ್ಲದೆ ರಾತ್ರಿ ಯಾವ ಹೊತ್ತಿನಲ್ಲಿ ಹಾಸಿಗೆಯನ್ನು ಸೇರಿದೆಯೋ ನನಗೆ ತಿಳಿಯದು. ಈಗ ಪ್ರಾತಃ ಕರ್ತವ್ಯ ಪಾಲನೆಗಾಗಿ ಹಾಸಿಗೆಯನ್ನು ಬಿಟ್ಟೇಳು. ಕೋದಂಡರಾಮಾ! ಸ್ವಾಮಿ! ನಿನಗೆ ಸುಪ್ರಭಾತ ವಾಗಲಿ.

ಭಗವಂತನು ಶರಣಾಗತ ರಕ್ಷಕನು. ಅದರಲ್ಲಿ ಆತನ ಏಕ ಮುಖತೆ ಅದ್ವಿತೀಯವಾದದ್ದು. ಭಕ್ತ ಪರವಶನಾದ ಆ ಸ್ವಾಮಿ ಲಕ್ಷ್ಮಿಗೆ ಹೇಳದೆಯೇ, ಶಂಖ ಚಕ್ರಗಳನ್ನು ಅನುಸಂಧಿಸದೆಯೇ, ಗರುಡ ವಾಹನವಿಲ್ಲದೆಯೇ, ಶರಣಾಗತರ ಆಕ್ರಂದನ ಕೇಳಿದೊಡನೆಯೇ ಅಲ್ಲಿಗೆ ಹೊರಡುವುದು ನಮಗೆ ತಿಳಿದಿದೆ. ಆರ್ತರಾದ ಭಕ್ತರನ್ನು ಆದರಿಸಿ ರಾತ್ರಿ ಯಾವಾಗಲೋ ನಿದ್ದೆ ಹೋದಂತಿದ್ದಾನೆ. ನಮಗೇನು ಗೊತ್ತು? ಇನ್ನೆಷ್ಟು ಮಂದಿ ಭಕ್ತರ ರಕ್ಷಣೆಗಾಗಿ ಮೊರೆಯಿಡುತ್ತಿದ್ದಾರೋ? ವಿಶ್ವರಕ್ಷಕನಿಗೆ ವಿಶ್ರಾಂತಿ ಎಲ್ಲಿನದು? ಆದರೇನು ಕರ್ತವ್ಯ ಪರಿಪಾಲನೆಗಾಗಿ ಆತ ನಿದ್ದೆಯಿಂದೇಳಬೇಕು. ಎಷ್ಟೋಮಂದಿ ಆತನ ಸಂದರ್ಶನಕ್ಕೆ, ಸಂರಕ್ಷಣೆಗಾಗಿ ಕಾಯುತ್ತಿದ್ದಾರೆ. ಬೇಗೆದ್ದು ಕರ್ತವ್ಯ ನಿರ್ವಹಿಸಲೆಂದು ಕವಿಯಭಾವ.

ರೂಪಂ ತ್ವದೀಯಮಭಿವರ್ಣ್ಯ ಮನೋಹರಂ
ತತ್
ಚೂಡಾಮಣಿಂ ಜನಕಜಾನುಗೃಹಿತ
ಮಾರ್ಯಃ।
ಆದಾಯ ಪಾವನಿರಿಹೋಪಗತಃ ಪ್ರಸೀದ;
ಕೋದಂಡರಾಮ! ಭಗವಂಸ್ತವ
ಸುಪ್ರಭಾತಂ॥ –14–

ನಿನ್ನ ದಿವ್ಯ ಸುಂದರ ರೂಪಾತಿಶಯವನ್ನು ವಿವರಿಸಿ, ಸೀತಾದೇವಿ ನೀಡಿದ ಚೂಡಾಮಣಿಯನ್ನು ತೆಗೆದು ಕೊಂಡು ಪೂಜ್ಯನಾದ ಆಂಜನೇಯನು ನಿನ್ನ ಬಳಿ ಬಂದಿದ್ದಾನೆ. ಆತನನ್ನು ಅನುಗ್ರಹಿಸು. ಓ ಕೋದಂಡರಾಮಾ! ಸ್ವಾಮೀ! ನಿನಗೆ ಸುಪ್ರಭಾತವಾಗಲಿ.

ಭಗವಂತನಿಂದ ದೂರವಾಗಿ, ಭವಬಂಧನ ಬದ್ಧನಾಗಿ ತೊಳಲುತ್ತಿರುವ ಜೀವಿಗೆ ಮತ್ತೆ ಆತನ ಸಾನ್ನಿಧ್ಯ ದೊರೆಯ ಬೇಕಾದಲ್ಲಿ, ಧೈರ್ಯ ಹೇಳಿ, ಮಾರ್ಗವನ್ನು ತೋರಿಸುವ ಆಚಾರ್ಯನು ಬೇಕು. ಭಕ್ತ ಭಗವಂತರ ನಡುವೆ ಆತ ಒಬ್ಬದೂತ. ಭಗವಂತನ ಗುಣಗಳನ್ನು, ಭಕ್ತ ರಕ್ಷಣದೀಕ್ಷೆಯನ್ನು ವಿವರಿಸಿ, ಭಕ್ತನನ್ನು ಸ್ವಾಮಿಯ ಅಭಿಮುಖನನ್ನಾಗಿಸುತ್ತಾನೆ ಆತ. ಅಶೋಕವನದಲ್ಲಿ ಶೋಕ ವಿಶ್ರಾಂತಳಾಗಿದ್ದ ಸೀತಾದೇವಿಗೆ ರಾಮನ ಬಗ್ಗೆ ತಿಳಿಸಿ, ರಾಮನಿಗೆ ಆಕೆಯ ಕುಶಲವಾರ್ತೆಯನ್ನು ತಿಳಿಸಿದ ಹನುಮಂತನು ಆಚಾರ್ಯ ಸ್ಥಾನೀಯನೆಂಬುದು ತತ್ತ್ವವೇತ್ತರ ಅಭಿಮತ. ಮದನ ಮನೋಹರನಾದ ದಾಶರಥಿಯ ರೂಪಾತಿಶಯವನ್ನು, ಆತನ ಈಗಣ ವಿರಹದ ನೋವನ್ನು ಮೈಥಿಲಿಗೆ ತಿಳಿಸಿದವನು ಪಾವನಿ. ತನ್ನ ಇರುವಿಕೆಯ ಗುರುತಿಗಾಗಿ ಚೂಡಾಮಣಿಯನ್ನಿತ್ತಳು ಜಾನಕಿ. ಅದನ್ನು ಪಡೆದುಕೊಂಡು ಸೀತೆಯ ಕುಶಲವಾರ್ತೆಯನ್ನು ತಿಳಿಸಲು ಕಪಿಸೈನ್ಯದೊಡನೆ ಹನುಮಂತನು ರಾಮನಿಗೆ ತಿಳಿಸಲು ಬಂದಿದ್ದಾನೆ. ಇನ್ನು ತಡವೇಕೆ? ಎದ್ದು ವಾಯುಪುತ್ರನನ್ನು ಅಭಿನಂದಿಸಿ ಕರ್ತವ್ಯವನ್ನು ಆಲೋಚಿಸಬಾರದೇ!

ತೀರ್ಥೋದಕಾನ್ಯುಪಹೃತಾನಿ ಕಪಿ ಪ್ರವೀರೈಃ
ಲಂಕಾಧಿಪೇನ ಸಹ ಮಂತ್ರಯತೇ ವಸಿಷ್ಠಃ
ತ್ವದ್ದರ್ಶನಾರ್ಥ ಮನಘಸ್ತ್ವರತೇ
ಹನೂಮಾನ್
ಕೋದಂಡರಾಮ! ಭಗವಂಸ್ತವ
ಸುಪ್ರಭಾತಂ –15–

ವಾನರಪುಂಗವರೆಲ್ಲ ಪವಿತ್ರ ಉದಕಗಳನ್ನು ಶೇಖರಿಸಿದ್ದಾರೆ. ವಿಭೀಷಣನೊಡನೆ ವಸಿಷ್ಠನು ಯಾವುದೋ ಆಲೋಚನೆ ಮಾಡುತ್ತಿದ್ದಾನೆ. ಹನುಮಂತನು ನಿನ್ನ ದರ್ಶನಕ್ಕಾಗಿ ತ್ವರೆ ಮಾಡುತ್ತಿದ್ದಾನೆ. ಪಟ್ಟಾಭಿಷೇಕದಂತಿದೆ; ಓ ಕೋದಂಡ ರಾಮಾ! ಸ್ವಾಮೀ! ನಿನಗೆ ಸುಪ್ರಭಾತವಾಗಲಿ.

ಲೋಕ ಕಂಟಕನಾದ ರಾವಣನು ನಿಹತನಾದ. ಮೂರುಲೋಕಗಳೇ ಸಂಭ್ರಮದಿಂದ ಹಬ್ಬವನ್ನಾಚರಿಸುತ್ತಿವೆ. ರಾಮನು ಅರಣ್ಯ ವಾಸವನ್ನು ಮುಗಿಸಿ ಅಯೋಧ್ಯೆಯನ್ನು ಸೇರಿದ್ದಾನೆ. ಸಾಮ್ರಾಜ್ಯ ಪಟ್ಟಾಭಿಷೇಕಕ್ಕೆ ಏರ್ಪಾಡುಗಳು ನಡೆಯುತ್ತಿವೆ. ಲೋಕದ ಎಲ್ಲ ಪವಿತ್ರಜಲಗಳನ್ನೂ ಕಪಿವೀರರು ಶೇಖರಿಸಿದರು ಮಹರ್ಷಿಗಳು, ಸಾಮಂತರು ರಾಜರ್ಷಿಗಳು, ಉತ್ಸಾಹದಿಂದ ಪಟ್ಟಾಭಿಷೇಕವನ್ನು ನೋಡಲು ಆಗಮಿಸಿದ್ದಾರೆ. ಕುಲಗುರು ವಸಿಷ್ಠನು ಲಂಕಾಧಿಪತಿ ವಿಭೀಷಣನೊಂದಿಗೆ ಯಾವುದೋ ಮುಖ್ಯ ಅಂಶವನ್ನು ಕುರಿತು ಆಲೋಚಿಸುತ್ತಿದ್ದಾನೆ. ನಿದ್ರಾಸಕ್ತವಾದ ನಿನ್ನ ಅರವಿಂದ ನಯನಗಳ ದರ್ಶನಕ್ಕಾಗಿ ಹನುಮಂತನು ಕಾತರನಾಗಿದ್ದಾನೆ. ಎದ್ದು ಅವರೆಲ್ಲರ ಅಪೇಕ್ಷೆಯಂತೆ ರಾಮರಾಜ್ಯವನ್ನು ಸ್ಥಾಪಿಸ ಬೇಕಾಗಿದೆ. ಅವರಿಗೆ ರಾಮರಾಜ್ಯ ಬೇಕಿದೆ. ಆದ್ದರಿಂದ ಸ್ವಾಮಿ ನಿದ್ದೆಯಿಂದೇಳಬೇಕು.

ಧರ್ಮೋ ಗತಃ ಪರಮಶಾಂತಿಯುತಂ
ಪ್ರಜಾನಾಂ
ಚೇತೋಭಿವಾಂಛತಿ ಪುನರ್ಮನು
ರಾಮರಾಜ್ಯಂ
ಉತ್ಥಾಯ ಸಂಪ್ರತಿ ದಯಾಮಯ!
ಪಾಲಯಾಸ್ಮಾನ್
ಕೋದಂಡರಾಮ! ಭಗವಂ ಸ್ತವ ಸುಪ್ರಭಾತಂ
–16–

ಧರ್ಮ ನಶಿಸುತ್ತಿದೆ. ಪ್ರಜೆಗಳ ಮನ ಅಶಾಂತಿಯಿಂದಾಗಿ ಪ್ರಶಾಂತವಾದ ರಾಮರಾಜ್ಯವನ್ನು ಬಯಸುತ್ತಿದೆ. ಓ ದಯಾಮಯ! ಈಗ ನಿದ್ದೆಯಿಂದೆದ್ದು ನಮ್ಮನ್ನು ಪಾಲಿಸುವವನಾಗು. ಓ ಕೋದಂಡರಾಮ! ಸ್ವಾಮಿ! ನಿನಗೆ ಸುಪ್ರಭಾತ ವಾಗಲಿ.

ಧರ್ಮವು ಹೆಸರಿಗೆ ಮಾತ್ರ ಇದ್ದು ನಾಶದತ್ತ ನಡೆದಿದೆ. ಧಾರ್ಮಿಕ ಭಾವನೆ, ಧಾರ್ಮಿಕ ತುಡಿತ, ಪ್ರವೃತ್ತಿಗಳು ಹುಡುಕಿದರೂ ಸಿಗುತ್ತಿಲ್ಲ. ಜೀವನದಲ್ಲಿ ಶಾಂತಿ ಮೃಗ್ಯವಾಗಿದೆ. ಪ್ರಜೆಗಳ ಮನ ನಿರುತ್ಸಾಹದಿಂದ, ನಿರಾಸೆಯಿಂದ, ನಿಸ್ಪೃಹೆಯಿಂದ ತುಂಬಿದೆ. "ರಾಮನು ಬರುತ್ತಾನೆ, ನಮಗೆ ರಾಮರಾಜ್ಯ ಲಭಿಸುತ್ತದೆ" ಎನ್ನುತ್ತ ಅವರೆಲ್ಲ ನಿರೀಕ್ಷಿಸುತ್ತಿದ್ದಾರೆ. ಪ್ರಜೆಗಳು ಇಹಪರಸುಖಗಳು ಕಡಮೆಯಾಗದಂತಹ ಧಾರ್ಮಿಕವಾದ, ಶಾಂತಿಯುತವಾದ ರಾಮರಾಜ್ಯವನ್ನು ಆಕಾಂಕ್ಷಿಸುತ್ತಿದ್ದಾರೆ. ಧರ್ಮಸಂಸ್ಥಾಪನೆಗಾಗಿ, ಮೂರ್ತೀಭವಿಸಿದ ಧರ್ಮವಾಗಿ ಅವತರಿಸಿದ ಸ್ವಾಮಿಯು ದಯಾಮಯ. ಸಾಧು ಪರಿತ್ರಾಣ ಖಂಡಿತ ನಡೆಯುತ್ತದೆ. ಆದರೆ ಇದೆಲ್ಲವೂ ನಿದ್ದೆಯಿಂದೆದ್ದ ಮೇಲೆ ತಾನೆ! ಹಾಗಾಗಿ ಬೇಗನೆ ಏಳಬೇಕೆಂಬುದು ಕವಿ ಹೃದಯ. (ಮುಂದು ವರೆಯುವುದು)

# ಯುವವಾಣಿ

ಅಧ್ಯಾತ್ಮ ರಾಮಾಯಣವು ಸಂಸ್ಕೃತಭಾಷೆಯಲ್ಲಿನ ಒಂದು ಪುರಾಣಕಾವ್ಯ ರಾಮನ ಅವತಾರಮಾಹಾತ್ಮ್ಯವನ್ನು ವರ್ಣಿಸುವುದೇ ಅದರ ಪ್ರಧಾನಧ್ಯೇಯ, ರಾಮನ ಚರಿತ್ರೆಯನ್ನು ವರ್ಣಿಸುವಾಗ ಸಾಧ್ಯವಾದೆಡೆಗಳಲ್ಲೆಲ್ಲ ಅಧ್ಯಾತ್ಮ ತತ್ತ್ವಗಳ ವಿವರಣೆಯನ್ನು ನಿರೂಪಿಸುತ್ತದೆ. ಆದುದರಿಂದಲೇ ಅದಕ್ಕೆ ಅಧ್ಯಾತ್ಮರಾಮಾಯಣವೆಂಬ ಹೆಸರು ಬಂದಿದೆ. ಇದು ಬಹುಮಟ್ಟಿಗೆ ವಾಲ್ಮೀಕಿ ರಾಮಾಯಣದ ಸಂಗ್ರಹರೂಪವೇ ಆದರೂ ಕಥಾಶರೀರದಲ್ಲಿಯೂ ಧ್ಯೇಯದೃಷ್ಟಿಯಲ್ಲಿಯೂ ವಿಶೇಷ ಭಿನ್ನತೆಗಳಿವೆ.

ಇದು ಪಾರ್ವತಿ ಪರಮೇಶ್ವರರ ಸಂಭಾಷಣಾ ರೂಪದಲ್ಲಿದೆ, ಮಹಾಶಿವನು ಶ್ರೀರಾಮನಿಂದಲೇ ಕೇಳಿದ ರಾಮಚರಿತ್ರೆಯನ್ನು ಪಾರ್ವತಿಗೆ ತಿಳಿಸುತ್ತಾನೆ. ಇದರಲ್ಲಿ ಏಳು ಕಾಂಡಗಳೂ ಅರವತ್ತನಾಲ್ಕು ಸರ್ಗಗಳೂ ನಾಲ್ಕುಸಾವಿರದ ಇನ್ನೂರು ಶ್ಲೋಕಗಳೂ ಇವೆ. ನೂರಾರು ಶ್ರುತ್ಯರ್ಥಗಳ ವಿವರಣೆಯಿಂದ ಕೂಡಿದೆ.

ವಾಲ್ಮೀಕಿರಾಮಾಯಣದ ನಾಯಕನಾದ ಶ್ರೀರಾಮ ಸಕಲಗುಣ ಪರಿಪೂರ್ಣನಾದ ಆದರ್ಶ ಮಾನವ. ಆತನಲ್ಲಿ ಮಾನವದೌರ್ಬಲ್ಯವನ್ನು ಕಾಣಬಹುದು. ಆದರೂ ಎಲ್ಲವಿಧವಾದ ದೌರ್ಬಲ್ಯವನ್ನು ಪರಿಹರಿಸಿಕೊಂಡು ಮಾನವತ್ವದಿಂದ ದೇವತ್ವಕ್ಕೆ ಏರಿದ ಶ್ರೇಷ್ಠವ್ಯಕ್ತಿ. ಅವನ ಗುಣಗಳ ಪರಿಚಯದಿಂದ ಜನರು ಅವನನ್ನು ದೇವಾಂಶ ಸಂಭೂತನೆಂದು ತಿಳಿಯುವರು. ದೇವತೆಗಳೂ ಮನುಷ್ಯಲೋಕಕ್ಕೆ ಇಳಿದುಬಂದು ಪ್ರಶಂಸಿಸುವರು. ಕಷ್ಟಪಟ್ಟರೆ ಮನುಷ್ಯರೂ ಅವನನ್ನು ಅನುಸರಿಸಲು ಸಾಧ್ಯ. ಅವನ ಪರಿವಾರದ ಇತರ ಪಾತ್ರಗಳೂ ಇದೇ ಮಾನವೀಯಗುಣಗಳಿಂದ ಕೂಡಿದವರೂ ಸೂಕ್ತಸಂದರ್ಭಗಳಲ್ಲಿ ತಮ್ಮ ದೌರ್ಬಲ್ಯವನ್ನು ಪ್ರದರ್ಶಿಸಿದರೂ ಬಹುಮಟ್ಟಿಗೆ ಆದರ್ಶವ್ಯಕ್ತಿಗಳಾಗುವರು. ಆದುದರಿಂದ ಅಲ್ಲಿಯಪಾತ್ರಗಳಲ್ಲಿ ಸಹಜತೆಯಿದೆ. ಬೆಳವಣಿಗೆಯಿದೆ. ಆತ್ಮೀಯತೆಯಿದೆ. ವೈಯಕ್ತಿಕ ಜವಾಬ್ದಾರಿಯಿದೆ. ಅವರ ಪರಿಚಯದಿಂದ ವಾಚಕರಮೇಲೆ ವಿಶೇಷ ಪರಿಣಾಮ ವುಂಟಾಗುತ್ತದೆ.

ಅಧ್ಯಾತ್ಮರಾಮಾಯಣದ ರಾಮ ಅವತಾರ ಪುರುಷ. ಮಾಯಾಮಾನವ. ಬ್ರಹ್ಮನ ಪ್ರಾರ್ಥನೆಯಪ್ರಕಾರ ಭೂಭಾರ ಪರಿಹಾರಕ್ಕಾಗಿ ರಾವಣನನ್ನು ವಧಿಸುವುದಕ್ಕಾಗಿ ಭೂಲೋಕದಲ್ಲಿ ಅವತರಿಸುವನು. ಅವನ ಸ್ಥಿರವಾದ ವಾಸಸ್ಥಳ ವೈಕುಂಠ. ಭೂಲೋಕಕ್ಕೆ ಬಂದಿರುವುದು ಕಾರಣಮಾತ್ರಕ್ಕಾಗಿ. ಭೂಲೋಕದಲ್ಲಿ ಅವನು ನಡೆಸುವ ಕಾರ್ಯಗಳೆಲ್ಲ ನಟನೆಮಾತ್ರ. ಅವನು ಸರ್ವಾಂತರ್ಯಾಮಿ; ಆದಿಪುರುಷ; ಸೃಷ್ಟಿಸ್ಥಿತಿಲಯಗಳೆಲ್ಲ ಅವನ ಕಾರ್ಯಗಳೇ; ಸಂಸಾರವು ಮಾಯೆ; ಅವನನ್ನು ತಿಳಿಯುವುದರಿಂದ, ಅವನನ್ನು ಸದಾ ಪ್ರಾರ್ಥಿಸುವುದರಿಂದ ಶಾಶ್ವತವಾದ ವಿಷ್ಣುಸಾಯುಜ್ಯವನ್ನು ಪಡೆಯಬಹುದು ಅವನು ಅವತಾರ ಪುರುಷನೆಂಬುದು ಅವನಿಗೂ ಇತರರಿಗೂ ಚೆನ್ನಾಗಿ ತಿಳಿದಿದೆ ಆದುದರಿಂದ ಜ್ಞಾನಿಗಳಾದವರೆಲ್ಲ ಹಾಗೆಂದೇ ದೀರ್ಘವಾಗಿ ಅವನನ್ನು ಪ್ರಾರ್ಥಿಸುವರು. ಅದರಿಂದ ಮುಕ್ತಿಯನ್ನು ಪಡೆಯುವರು. ಅವನು ಆವಶ್ಯಕವಾದಾಗಲೆಲ್ಲ ತನ್ನ ಆಶ್ರಿತರಾದ ಅನೇಕರಿಗೆ ತತ್ತ್ವೋಪದೇಶಮಾಡಿ ಮಾರ್ಗದರ್ಶನ ಮಾಡುವನು.

ಅವನ ಪರಿವಾರವೂ ಅಂತಹುದೇ. ಲಕ್ಷ್ಮಣನು ಆದಿಶೇಷಾವತಾರದವನು. ಭರತಶತ್ರುಘ್ನರು




ಶಂಖಚಕ್ರಾಂಶದಿಂದ ಜನಿಸಿದವರು. ಸೀತಾದೇವಿಯು ಆದಿಮಾಯೆ ಅವಳು ಎಂದೂ ತಪ್ಪು ಮಾಡುವುದಿಲ್ಲ. ಯಾರಿಂದಲೂ ಅವಮಾನಿತಳಾಗುವುದಕ್ಕೆ ಸಾಧ್ಯವಿಲ್ಲದವಳು. ಲೋಕಸಂರಕ್ಷಣಕ್ಕಾಗಿ ಅಂತಹ ಸಂದರ್ಭಗಳಲ್ಲೆಲ್ಲ ತನ್ನ ಮಾಯಾಂಶವನ್ನು ಸ್ಥಾಪಿಸಿ ಕಾರ್ಯಸಾಧನೆ ಮಾಡುವಳು.

ಮಹರ್ಷಿಗಳನೇಕರು ಸೂಕ್ತಕಾಲದಲ್ಲಿ ಅವನ ಅವತಾರ ರಹಸ್ಯವನ್ನು ಪೂರ್ವಭಾವಿಯಾಗಿ ತಿಳಿಯಪಡಿಸಿ ಅವನ ಸಂಕಲ್ಪಸಾಧನೆಯಲ್ಲಿ ಸಹಾಯಮಾಡುವರು. ಅವನಿಗೆ ತೊಂದರೆಯನ್ನುಂಟುಮಾಡುವವರೂ ಅವನ ಕಾರ್ಯಸಿದ್ಧಿಗಾಗಿಯೇ ದೈವದಿಂದ ಪ್ರೇರಿತರಾಗಿ ಕಾರ್ಯವಿಘ್ನವನ್ನುಂಟು ಮಾಡುವರು. ಅವನ ಶತ್ರುಗಳು ಕೂಡ ಅವನ ಅವತಾರ ರಹಸ್ಯವನ್ನು ತಿಳಿದು ಸದಾ ವಿರೋಧ ದೃಷ್ಟಿಯಿಂದ ಅವನನ್ನು ನೆನೆಯುತ್ತ ಅವನ ಕೈಯಿಂದ ಸತ್ತು ತನ್ಮೂಲಕ ಸದ್ಗತಿಯನ್ನು ಪಡೆಯುವರು

ಈ ಧ್ಯೇಯಧೋರಣೆಗಳ ಹಿನ್ನೆಲೆಯಲ್ಲಿ ರಚಿತವಾಗಿರುವ ಅಧ್ಯಾತ್ಮರಾಮಾಣದ ಕಥೆಯು ವಾಲ್ಮೀಕಿರಾಮಾಯಣಕ್ಕಿಂತ ಭಿನ್ನವಾಗಿಯೇ ಬೆಳೆಯುವುದು. ಕಥೆಯು ಮಹಾದೇವನಿಂದಲೇ ಪ್ರಾರಂಭವಾಗುವುದು ರಾಮನು ತನಗೆ ಹಿಂದೆ ತಿಳಿಸಿದುದನ್ನೇ ತಾನು ಪಾರ್ವತಿಗೆ ತಿಳಿಸುವನು ಕಥೆಯುದ್ದಕ್ಕೂ ಕಥಾಶರೀರ ಬೆಳೆಯುವುದಕ್ಕೆ ಅವನೇ ಸಂಬಂಧತಂತು. ಅಧ್ಯಾತ್ಮರಾಮಾಯಣವು ವಾಲ್ಮೀಕಿ ರಾಮಾಣದ ಸಂಗ್ರಹ ರೂಪದಲ್ಲಿರುವುದರಿಂದ ಇಲ್ಲಿ ಯಾವ ವಿಷಯಗಳ ವಿಸ್ತಾರ ವರ್ಣನೆಯೂ ಸಾಧ್ಯವಿಲ್ಲ. ವ್ಯಕ್ತಿ ಮತ್ತು ಸನ್ನಿವೇಶಗಳ ಪರಿಚಯ ಬಹು ಸಂಕ್ಷೇಪವಾಗಿ ನಿರೂಪಿತವಾಗುವುದು.

ದಶರಥನು ಸಂತಾನಲಾಭಕ್ಕಾಗಿ ಪುತ್ರಕಾಮೇಷ್ಟಿಯನ್ನು ಮಾಡುವನು. ಇಲ್ಲಿ ಋಷ್ಯಶೃಂಗನನ್ನು ಕರೆದು ತರುವುದರಲ್ಲಿ ಸುಮಂತ್ರನ ಕೈವಾಡವೇನಿರುವುದಿಲ್ಲ. ರಾಮನು ದಶರಥನ ಮಗನಾಗಿ ಹುಟ್ಟುವುದು ಹಿಂದೆ ಕಶ್ಯಪಋಷಿಯು ಪುತ್ರಪ್ರಾಪ್ತಿಯ ವರವನ್ನು ಪಡೆದಿದ್ದುದರ ಫಲವಾಗಿ. ವಿಷ್ಣುವು ತಾನು ಹಿಂದೆ ಅವನಿಗೆ ಕೊಟ್ಟಿದ್ದ ವಾಗ್ದಾನವನ್ನು ಪರಿಪಾಲಿಸುವುದಕ್ಕಾಗಿಯೇ ಇಕ್ಷ್ವಾಕುವಂಶದಲ್ಲಿ ಜನಿಸಿದುದು. ಯಜ್ಞದಲ್ಲಿ ಅಗ್ನಿದೇವನು ಕೊಟ್ಟ ದಿವ್ಯಪಾಯಸವನ್ನು ಕೌಸಲ್ಯ ಕೈಕೇಯಿಯರಿಗೆ ಸಮ ಅರ್ಧವಾಗಿ ಹಂಚಿದನು. ಅವರಿಬ್ಬರೂ ತಮ್ಮ ಭಾಗಕ್ಕೆ ಬಂದ ಅರ್ಧದಲ್ಲಿ ಅರ್ಧಾರ್ಧಭಾಗವನ್ನು ಸುಮಿತ್ರೆಗೆ ಕೊಟ್ಟರು ಆದುದರಿಂದ ಸುಮಿತ್ರೆಗೆ ಲಕ್ಷ್ಮಣ ಶತ್ರುಘ್ನರೆಂಬ ಇಬ್ಬರು ಮಕ್ಕಳು ಜನಿಸಿದರು ರಾಮನು ಜನಿಸಿದಾಗ ಶಂಖಚಕ್ರಗದಾಪಾಣಿಯಾಗಿ ಕೌಸಲ್ಯೆಗೆ ತೋರ್ಪಡಿಸಿಕೊಂಡನು. ಅವಳ ಪ್ರಾರ್ಥನೆಯ ಮೇಲೆಯೇ ಅವನು ಮಾನವ ಶಿಶುರೂಪವಾಗಿ ಮಾರ್ಪಡಿಸಿಕೊಂಡುದು. ತನ್ನ ರೂಪವು ಅವಳ ಮನಸ್ಸಿನಲ್ಲಿ ಸದಾ ನೆಲೆಸಿರುವಂತೆ ಅವಳಿಗೆ ವರವನ್ನು ಕೊಡುವನು. ಅವನ ಬಾಲಲೀಲೆಯು ಭಾಗವತದ ಕೃಷ್ಣಲೀಲೆಯಷ್ಟು ಆಕರ್ಷಕವಾಗಿದೆ. ಅಲ್ಪಕಾಲದಲ್ಲಿ ಸರ್ವವಿದ್ಯಾಪಾರಂಗತನಾದ ರಾಮನನ್ನು ಯಜ್ಞರಕ್ಷಣೆಗಾಗಿ ವಿಶ್ವಾಮಿತ್ರರು ದಶರಥನನ್ನು ಯಾಚಿಸುವರು. ಅವನನ್ನು ಕಳುಹಿಸಲು ದಶರಥನು ಹಿಂಜರಿಯುತ್ತಿದ್ದಾಗ ವಸಿಷ್ಠರು ರಾಮಾವತಾರ ರಹಸ್ಯವನ್ನು ವಿವರಿಸಿ ಆದಿಮಾಯೆಯಾದ ಸೀತಾದೇವಿಯೊಡನೆ ಒಟ್ಟು

ಡಾ॥ ಎನ್. ಅನಂತರಂಗಾಚಾರ್

ಗೂಡಿಸುವುದಕ್ಕಾಗಿಯೇ ವಿಶ್ವಾಮಿತ್ರರು ಬಂದಿರುವರೆಂದು ತಿಳಿಸಿದಾಗ ದಶರಥನು ಸಂತೋಷದಿಂದ ರಾಮನನ್ನು ಕಳುಹಿಸಿಕೊಡುವನು. ಇಲ್ಲಿಯ ರಾಮನು ಸರ್ವಜ್ಞನಾದ ಆದಿಶಕ್ತಿಯಾದುದರಿಂದ ವಿಶ್ವಾಮಿತ್ರರ ಶಸ್ತ್ರಾಸ್ತ್ರಗಳ ಉಪದೇಶದ ಪ್ರಸ್ತಾಪವೇ ಇಲ್ಲ. ತಾಟಕಾವಧೆಯಾದಮೇಲೆ ಅವಳು ಶಾಪವಿಮುಕ್ತಳಾದುದರಿಂದ ತೇಜೋಮಯಳಾಗಿ ರಾಮನ ಶರೀರದಲ್ಲಿಯೇ ಐಕ್ಯಳಾಗುವಳು. ಬಾಲಕಾಂಡದಲ್ಲಿ ಬರುವ ಅನೇಕ ಉಪಕಥೆಗಳಲ್ಲಿ ಅಹಲ್ಯಾಶಾಪ ವಿಮೋಚನದ ವಿಷಯ ವಿನಾ ಮತ್ತಾವುದೂ ಇಲ್ಲಿ ಉಕ್ತವಾಗಿಲ್ಲ. ಇಲ್ಲಿಯ ಕಥೆಯ ಪ್ರಕಾರ ಅಹಲ್ಯೆಯು ರಾಮಪಾದ ಸ್ಪರ್ಶವಾಗುವವರೆಗೂ ಕಲ್ಲಾಗಿಯೇ ಗೌತಮರ ಆಶ್ರಮದಲ್ಲಿಯೇ ಇರುವಳು. ಸೀತಾ ಸ್ವಯಂವರ ವೃತ್ತಾಂತವು ಬಹು ಸಂಗ್ರಹವಾಗಿ ನಿವೇದಿತವಾಗಿದೆ. ವಿಶ್ವಾಮಿತ್ರರ ಪೂರ್ವ ಚರಿತ್ರವಾಗಲಿ ಇಕ್ಷ್ವಾಕು ಮತ್ತು ಜನಕವಂಶಗಳ ವೃತ್ತಾಂತವಾಗಲಿ ಉಕ್ತವಾಗಿಲ್ಲ. ವಿವಾಹವಾದಮೇಲೆ ಅಯೋಧ್ಯೆಗೆ ಹಿಂತಿರುಗುವಾಗ ಪರಶುರಾಮನು ಭಂಗಿತನಾಗಿ ರಾಮನಿಂದ ಸದಾ ತಾನು ರಾಮಧ್ಯಾನದಲ್ಲಿ ನಿರತನಾಗಿರುವಂತೆ ವರವನ್ನು ಪಡೆಯುವನು.

ಅಯೋಧ್ಯಾಕಾಂಡದ ಪ್ರಾರಂಭದಲ್ಲಿ ದಶರಥನು ರಾಮನಿಗೆ ಯುವರಾಜ ಪಟ್ಟಾಭಿಷೇಕ ಮಾಡಲು ಹವಣಿಸುವನು. ಆಗ ಮೊದಲು ನಾರದರು ರಾಮನನ್ನು ಕುರಿತು ದೀರ್ಘವಾಗಿ ರಾಮಾವತಾರ ಕಾರಣವನ್ನು ತಿಳಿಸಿ ಅವನಿಂದ ಸತ್ಕೃತರಾಗುವರು. ವಸಿಷ್ಠರೂ ತಮ್ಮ ವೃತ್ತಿಯಾದ ಪೌರೋಹಿತ್ಯವು ಬಹು ಗರ್ಹಿತವಾದುದೆಂದೂ ಆದರೂ ರಾಮನ ಪುರೋಹಿತನಾಗುವ ಸೌಭಾಗ್ಯವು ತನಗೆ ದೊರೆಯುವುದೆಂಬ ಆಶೆಯಿಂದ ಮಾತ್ರ ತಾವು ರಘುಕುಲ ಪುರೋಹಿತರಾದರೆಂದೂ ಅದು ಈಗ ಪ್ರಾಪ್ತವಾದುದರಿಂದ ಇಷ್ಟಾರ್ಥ ಸಿದ್ಧಿಯಾಯಿತೆಂದೂ ತಿಳಿಸುವರು.

ಈ ವೇಳೆಗೆ ಸರಿಯಾಗಿ ದೇವಲೋಕದಲ್ಲಿ ದೇವತೆಗಳೆಲ್ಲ ಸಭೆಸೇರಿ ರಾಮನಿಗೆ ಪಟ್ಟಾಭಿಷೇಕವಾಗಿ ಬಿಟ್ಟರೆ ತಮ್ಮ ಕಾರ್ಯವಾದ ರಾವಣವಧೆಯಾಗಲಾರದೆಂದು ಯೋಚಿಸಿ ವಾಣಿಯನ್ನು ಕರೆದು ಅವಳು ಭೂಲೋಕಕ್ಕೆ ಹೋಗಿ ಮಂಥರೆ ಮತ್ತು ಕೈಕೇಯಿಯರನ್ನು ಪ್ರೇರಿಸಿ ಪಟ್ಟಾಭಿಷೇಕಕ್ಕೆ ವಿಘ್ನವನ್ನುಂಟುಮಾಡುವಂತೆ ಕೇಳಿಕೊಳ್ಳುವರು, ಅವಳು ಹಾಗೆಯೇ ಮಾಡುವಳು. ಆದರೂ ಕೈಕೇಯಿಯಲ್ಲಿ ವಿಶೇಷಕಾಮುಕನಾದ ವೃದ್ಧ ದಶರಥನು ಎಲ್ಲಿರಾಮಪಟ್ಟಾಭಿಷೇಕಕ್ಕೆ ಅಡ್ಡಿಯನ್ನುಂಟು ಮಾಡುವನೋ ಎಂದು ಕೌಸಲ್ಯೆಯು ದುರ್ಗಾಪೂಜೆಯನ್ನು ಮಾಡುವಳು. ಆದರ ಸಿದ್ಧಿಯಾಗದೆ ದೇವತೆಗಳ ಉದ್ದೇಶ ಸಫಲವಾಗಿ ರಾಮನು ವನವಾಸಕ್ಕೆ ಹೊರಡುವನು. ಪುತ್ರವಿರಹದಿಂದ ಪೀಡಿತಳಾದ ಕೌಸಲ್ಯೆಗೆ ರಾಮನು ತನ್ನ ಅವತಾರ ರಹಸ್ಯವನ್ನು ತಿಳಿಸಿ ಸಮಾಧಾನಮಾಡಿ ಸೀತಾ ಲಕ್ಷ್ಮಣರೊಡನೆ ಕಾಡಿಗೆ ತೆರಳುವನು

ದಾರಿಯಲ್ಲಿ ಭರದ್ವಾಜರು ರಾಮನನ್ನು ಕಂಡು ಜ್ಞಾನದೃಷ್ಟಿಯಿಂದ ತಮಗೆ ಎಲ್ಲವೂ ತಿಳಿದಿದೆಯೆಂದೂ, ರಾಮನು ತನ್ನ ಕಾರ್ಯವನ್ನು ಸಂಪೂರ್ಣಗೊಳಿಸಬೇಕೆಂದೂ ತಿಳಿಸಿ ವಾಲ್ಮೀಕಿ ಋಷಿಗಳ ಆಶ್ರಮವನ್ನು ತೋರಿಸುವರು. ಅವರಿಂದ ಸ್ತುತಿಸಲ್ಪಟ್ಟು ರಾಮಾದಿಗಳು ಪಂಚವಟಿಯಲ್ಲಿ ಬಂದು ನೆಲೆಸುವರು.

ಅಲ್ಲಿ ಲಕ್ಷ್ಮಣನು ರಾಮನನ್ನು ಕುರಿತು ಮೋಕ್ಷಮಾರ್ಗದ ವಿಷಯವಾಗಿ ವಿವರವಾಗಿ ತಿಳಿಸಬೇಕೆಂದು ಪ್ರಾರ್ಥಿಸುವನು. ರಾಮನು ಜ್ಞಾನ, ಅಜ್ಞಾನ, ಸಂಸಾರ, ಮೋಕ್ಷ ಇವುಗಳ ವಿಷಯವಾಗಿ ವಿಸ್ತಾರವಾಗಿ ಉಪದೇಶಮಾಡುವನು.

ಇಲ್ಲಿಯೇ ಶೂರ್ಪನಖಿಯು ರಾಮಲಕ್ಷ್ಮಣರಲ್ಲಿ ಮೋಹಿತಳಾಗಿ ಭಂಗಿತಳಾಗುವಳು, ಖರದೂಷಣಾದಿಗಳ ವಧೆಯಾಗುವುದು. ಆ ವಿಷಯವನ್ನು ವಾಲ್ಮೀಕಿರಾಮಾಯಣದಲ್ಲಿರುವಂತೆ ಮೊದಲು ಅಕಂಪನನು ತಿಳಿಸುವುದಿಲ್ಲ. ಆಗ ರಾವಣನು ಮಾರೀಚನ ಆಶ್ರಮಕ್ಕೆ ಹೋಗಿ ಅವನ ಉಪದೇಶದಿಂದ ಹಿಂತಿರುಗುವುದೂ ಇಲ್ಲ. ಶೂರ್ಪನಖಿಯೇ ನೇರವಾಗಿ ರಾವಣನಿಗೆ ಉದ್ರೇಕವನ್ನುಂಟುಮಾಡಲು, ರಾವಣನು ಚಿಂತಾಕ್ರಾಂತನಾಗುವನು. "ರಾಮನು, ಮನುಷ್ಯಮಾತ್ರನೇ ಆದರೆ ಖರಾದಿಗಳನ್ನು ಕೊಲ್ಲಲು ಸಾಧ್ಯವಿಲ್ಲ, ಬ್ರಹ್ಮನ ವರದಿಂದ ಮನುಷ್ಯರೂಪವನ್ನು ಧರಿಸಿ ಅವತರಿಸುವನು ಅವನು. ನನ್ನನ್ನು ಕೊಲ್ಲುವ ಸಂಕಲ್ಪವನ್ನು ಸಾಧಿಸಿಯೇ ತೀರುತ್ತಾನೆ. ಸತ್ತರೆ ಮೋಕ್ಷಸಾಮ್ರಾಜ್ಯ ಸಿಗುವುದು, ಉಳಿದರೆ ಇಷ್ಟಾರ್ಥಸಿದ್ಧಿಯಾಗಿ ರಾಕ್ಷಸರಾಜ್ಯ ಭದ್ರವಾಗವುದು."ಎಂದು ಸಿದ್ಧಾಂತ ಮಾಡಿಕೊಂಡು ಸೀತಾಹರಣ ಕಾರ್ಯಕ್ಕಾಗಿ ಮಾರೀಚನಲ್ಲಿಗೆ ತೆರಳುವನು. ಅವನು ರಾಮನ ಅಮಾನುಷತ್ವವನ್ನು ತಿಳಿಯಪಡಿಸಿದರೂ ತನ್ನ ಮೇಲಿನ ಸಿದ್ಧಾಂತವನ್ನೇ ಅವನಿಗೆ ತಿಳಿಸಿ ಅವನು ಮಾಯಾಮೃಗವಾಗಿ ಸಹಾಯಮಾಡುವಂತೆ ಒಪ್ಪಿಸಿ ರಾಮನ ಆಶ್ರಮಕ್ಕೆ ಬಂದು ಸೇರುವನು.

ರಾವಣನ ಈ ಚೇಷ್ಟೆಯೆಲ್ಲ ರಾಮನಿಗೆ ತಿಳಿಯಿತು. ಅವನು ಸೀತೆಯನ್ನು ಏಕಾಂತವಾಗಿ ಕರೆದು 'ಸೀತೆ! ಈಗ ರಾವಣನು ಭಿಕ್ಷುರೂಪದಿಂದ ನಿನ್ನನ್ನು ಅಪಹರಿಸಲು ಬರುವನು. ನೀನು ನಿನ್ನ ಛಾಯಾರೂಪವಾದ ಮಾಯಾಸೀತೆಯನ್ನು ಈ ಗುಡಿಸಿಲಿನಲ್ಲಿಟ್ಟು ನೀನು ಅಗ್ನಿಯಲ್ಲಿ ಅದೃಶ್ಯರೂಪದಿಂದ ಸೇರಿಕೊಂಡಿರು; ರಾವಣವಧೆಯಾದಮೇಲೆ ಪುನಃ ಬಂದು ಸೇರುವೆಯಂತೆ' ಎಂದು ಹೇಳಿದನು. ಸೀತೆಯು ಹಾಗೆಯೇ ಮಾಡಿದಳು, ಮಾಯಾಸೀತೆಯು ಗುಡಿಸಿಲಿನಿಂದ ಹೊರಗೆ ಬಂದು ಆ ಮಾಯಾಮೃಗವನ್ನು ತನಗೆ ತಂದುಕೊಡುವಂತೆ ರಾಮನನ್ನು ಪ್ರೇರೇಪಿಸಿದಳು, ಲಕ್ಷ್ಮಣನು ಅದು ಮಾರೀಚನ ಮಾಯಾರೂಪವೆಂದೇ ಎಚ್ಚರಿಸಿದನು. ಆದರೆ ರಾಮನು 'ಅದು ಮಾರೀಚನೇ ಆದರೆ ಕೊಲ್ಲುತ್ತೇನೆ. ಇಲ್ಲವಾದರೆ ಕೊಂಡು ಚರ್ಮವನ್ನು ತರುತ್ತೇನೆ' ಎಂದು ಮೃಗದ ಹಿಂದೆಯೇ ಹೋದನು. ರಾಮನೂ ಸೀತೆಯ ಬಲಾತ್ಕಾರದಿಂದ ಲಕ್ಷ್ಮಣನೂ ಆಶ್ರಮದಿಂದ ಹೊರಗೆ ಹೋದಮೇಲೆ ರಾವಣನು ಮಾಯಾಸೀತೆಯನ್ನು ಸಮೀಪಿಸಿ ನಾನಾವಿಧವಾಗಿ ಅವಳನ್ನು ಪ್ರಲೋಭನಮಾಡಿದರೂ ಅವಳು ಒಪ್ಪದಿರಲು ಭಯಂಕರಾಕಾರನಾದ ತನ್ನ ಉಗುರುಗಳಿಂದ ಭೂಮಿಯನ್ನು ಸೀಳಿ ಗುಡಿಸಲಿನೊಡನೆ ಅವಳನ್ನು ತನ್ನ ರಥದಲ್ಲಿ ಏರಿಸಿ ಸೆಳೆದುಕೊಂಡು ಹೋದನು. ಹೋಗುತ್ತಿದ್ದ ಸೀತೆಯು 'ಎಲೈ ಮೈದುನನಾದ ಲಕ್ಷ್ಮಣನೇ ನಿನ್ನನ್ನು ನಾನು ವಾಕ್ಬಾಣಗಳಿಂದ ಕತ್ತರಿಸಿದ್ದೇನೆ, ನೀನು ದಯವಿಟ್ಟು ಕ್ಷಮಿಸಿ ಕಾಪಾಡು ಎಂದು ಹಲುಬುವಳು.

ಮಾಯಾಮೃಗವನ್ನು ಹಿಂಬಾಲಿಸಿದ ರಾಮನು ಬಹುದೂರಹೋಗಿ ಅದನ್ನು ಸಂಹಾರಮಾಡಿದನು. ಎಲ್ಲ ದೇವತೆಗಳೂ ನೋಡುತ್ತಿದ್ದಂತೆಯೇ ಆ ಮಾರೀಚನ ದೇಹದಿಂದ ಒಂದು ದಿವ್ಯತೇಜಸ್ಸು ಹೊರಟು ರಾಮದೇಹವನ್ನು ಪ್ರವೇಶಿಸುವುದು. 'ಇಂತಹ ಪಾಪಿಗೆ ಈ ದೆಶೆಯುಂಟಾಯಿತಲ್ಲಾ' ಎಂದು ಎಲ್ಲರೂ ಆಶ್ಚರ್ಯಪಟ್ಟುಕೊನೆಗೆ ವಿರೋಧಿಯಾಗಿದ್ದರೂ ಸರ್ವಸಂಗಪರಿತ್ಯಾಗಮಾಡಿ ರಾಮನನ್ನೇ ಧ್ಯಾನಿಸುತ್ತಿದ್ದುದರಿಂದ ಮಾರೀಚನಿಗೆ ಈ ಸದ್ಗತಿಯುಂಟಾಯಿತೆಂದು ಸಮಾಧಾನಗೊಳ್ಳುವರು.

ರಾಮನು ಆಶ್ರಮಕ್ಕೆ ಹಿಂತಿರುಗುತ್ತಾ ತನ್ನಲ್ಲಿಯೇ ಹೀಗೆ ಯೋಚಿಸಿದನು. ಮಾಯಾಸೀತೆಯ ವಿಷಯವು ಲಕ್ಷ್ಮಣನಿಗೂ ತಿಳಿಯದು. ಆದರೂ ಬಾಧಕವಿಲ್ಲ. ನಾನೇನೋ ಸ್ವಸ್ಥಚಿತ್ತನಾಗಿರುತ್ತೇನೆ. ಆದರೂ ಲೋಕತೃಪ್ತಿಗಾಗಿ ದುಃಖಪಡುತ್ತೇನೆ. ಹಾಗಿಲ್ಲದಿದ್ದರೆ ರಾಕ್ಷಸವಧೆಯಾಗುವುದಿಲ್ಲ ಎಂದು ಲಕ್ಷ್ಮಣನ ಜೊತೆಯಲ್ಲಿ ಬಹು ದುಃಖದಿಂದ ಅವಳಿಗಾಗಿ ಅಲೆದಾಡಿದನು. ಮಾರ್ಗದಲ್ಲಿ ಜಟಾಯುದರ್ಶನವಾಗುವುದು. ಜಟಾಯುವು ರಾಮನನ್ನು ಬಹು ದೀರ್ಘವಾಗಿ ಸ್ತೋತ್ರಮಾಡುವನು. ಆದರಿಂದ ತೃಪ್ತನಾದ ರಾಮನು ಅವನಿಗೆ ಪರಮಪದ ಪ್ರಾಪ್ತಿಯನ್ನುಂಟುಮಾಡುವನು.

ಮುಂದೆ ಕಬಂಧ ದರ್ಶನವೂ ಅವನ ಪೂರ್ವ ಕಥಾನಿರೂಪಣವೂ ವಿಸ್ತಾರವಾಗಿ ಉಕ್ತವಾಗಿದೆ. ಕಬಂಧನು ರಾಮನನ್ನು ಮುಕ್ತಕಂಠದಿಂದ

ಸ್ತೋತ್ರವಮಾಡುವನು ಮುಂದೆ ರಾಮ ಲಕ್ಷ್ಮಣರು ಶಬರಿಯ ಆಶ್ರಮಕ್ಕೆ ಹೋಗಿ ಅವಳಿಂದ ಸತ್ಕೃತರಾಗುವರು ಸಂತುಷ್ಟನಾದ ರಾಮನು ಶಬರಿಗೆ ರಾಮಧ್ಯಾನದ ಮಹಿಮೆಯನ್ನು ವಿಸ್ತಾರವಾಗಿ ನಿರೂಪಿಸುವನು. ಶಬರಿಯು ರಾಮಪ್ರಾರ್ಥನೆಯನ್ನು ಮಾಡಿ ಅಗ್ನಿಪ್ರವೇಶ ಮಾಡಿದಮೇಲೆ ಪರಮಪದವನ್ನು ಸೇರುತ್ತಾಳೆ. ಶಬರಿಯ ಪ್ರಾರ್ಥನೆಯು ಪ್ರತ್ಯೇಕವಾದ ಭಕ್ತಿಗೀತೆಯಂತಿದೆ. ಇತರ ಎಲ್ಲ ಗೀತೆಗಳ ಅಂತ್ಯದಲ್ಲಿರುವಂತೆ ಇಲ್ಲಿಯೂ ಫಲಶ್ರುತಿಯಿದೆ.

ಋಷ್ಯಮೂಕಪರ್ವತದಲ್ಲಿ ಹನುಮಂತನು ರಾಮನನ್ನು ಸಂದರ್ಶಿಸಿ ಅವನ ಅನಾದಿ ರೂಪವನ್ನೂ ಅವತಾರ ಮಹಿಮೆಯನ್ನೂ ನಿರೂಪಿಸುವನು. ಸುಗ್ರೀವ ಸಂದರ್ಶನವಾಗುವುದು. ಪ್ರಾರಂಭದ ಪರಿಚಯ ಸಂವಾದವಾದ ಮೇಲೆ ಸುಗ್ರೀವನು ರಾಮನ ಅಪಾರ ಮಹಿಮೆಯನ್ನು ಕೊಂಡಾಡುವನು. ಅದರಿಂದ ಸಂತುಷ್ಟನಾದ ರಾಮನು ಪರಸ್ಪರ ಸಂಭಾಷಣೆಯಾದ ಮೇಲೆ ವಾಲಿ ಸಂಹಾರ ಮಾಡುವುದಾಗಿ ವಾಗ್ದಾನ ಮಾಡುವನು. ವಾಲಿ ಸುಗ್ರೀವರ ಕಾಳಗವಾಗುವುದು. ಅಪಾರ ಸಾಮ್ಯದಿಂದ ರಾಮನು ಬಾಣಪ್ರಯೋಗ ಮಾಡಲಾಗುವುದಿಲ್ಲ. ನೊಂದು ಬಂದು ಸುಗ್ರೀವನಿಗೆ ಪುನಃ ಆಶ್ವಾಸನೆಯನ್ನಿತ್ತ ಮೇಲೆ ಸುಗ್ರೀವನು ಅಣ್ಣನನ್ನು ಪುನಃ ಯುದ್ಧಕ್ಕೆ ಆಹ್ವಾನಿಸುವನು. ಆಗ ವಾಲಿಯ ಪತ್ನಿಯಾದ ತಾರೆಯು ಅವನನ್ನು ನಿರೋಧಿಸಿ ರಾಮನ ಅಸಾಧಾರಣ ಶಕ್ತಿಯನ್ನು ವಿವರಿಸುವಳು. ಅದಕ್ಕೆ ವಾಲಿಯು ರಾಮನು ಸಾಕ್ಷಾನ್ನಾರಾಯಣನೆಂದೂ ಅವನಿಗೆ ಪಕ್ಷಪಾತವಿಲ್ಲವೆಂದೂ ತಾನು ಅವನಿಗೆ ಶರಣಾಗತನಾಗಿ ಕರೆದು ತರುವೆನೆಂದೂ ಹೇಳಿ ಹೋಗುವನು. ರಾಮಬಾಣದಿಂದ ಮುಮೂರ್ಷಾವಸ್ಥೆಯಲ್ಲಿ ಒರಗುವನು. ಆಗ ವಾಲಿಗೆ ರಾಜೀವಲೋಚನನೂ ವಿಶಾಲವಕ್ಷನೂ ಜಟಾಮಂಡಲಧಾರಿಯೂ ಚೀರವಾಸನನೂ ಆದ ರಾಮನ ದರ್ಶನವಾಗುವುದು. ವಾಲಿಯು ನಿರಪರಾಧಿಯಾದ ತನ್ನನ್ನು ವೃಕ್ಷದ ಮರೆಯಲ್ಲಿ ನಿಂತು ವಧಿಸಿದ ನೀಚಕೃತ್ಯಕ್ಕೆ ರಾಮನು ಏಕೆ ಕೈಯಿಟ್ಟನೆಂದು ಪ್ರಶ್ನಿಸುವನು. ರಾಮನು ಸೂಕ್ತ ಉತ್ತರವನ್ನಿತ್ತ ಮೇಲೆ ವಾಲಿಯು ರಾಮನಿಗೆ ಪ್ರಣಾಮಮಾಡಿ ಸಂತೃಪ್ತನಾಗಿ ರಾವಣ ವಧಾರ್ಥವಾಗಿ ಅವತರಿಸಿದ ಕಾರ್ಯವು ನಿರ್ವಿಘ್ನವಾಗಿ ನಡೆಯಲಿ ಎಂದು ಹಾರೈಸಿ ಪರಮಪದವನ್ನು ಸೇರುವನು. ಪತಿವಿರಹ ದುಃಖಿನಿಯಾದ ತಾರೆಗೆ ರಾಮನು ಶರೀರದ ಅಶಾಶ್ವತೆಯನ್ನೂ ಸಂಸಾರದ ಅನಿತ್ಯತೆಯನ್ನು ಪತಿಪತ್ನಿರೂಪವಾದ ಮಾಯಾ ಸಂಬಂಧದ ರಹಸ್ಯವನ್ನೂ ಮೋಕ್ಷಜ್ಞಾನ ಸ್ವರೂಪವನ್ನು ತಿಳಿಸಿ ಸಮಾಧಾನ ಮಾಡುವನು. ವಾಲಿಯ ಉತ್ತರ ಸಂಸ್ಕಾರ, ಸುಗ್ರೀವ ಪಟ್ಟಾಭಿಷೇಕಗಳು ನಾಂಗವಾಗಿ ನೆರವೇರುವುವು. ರಾಮಲಕ್ಷ್ಮಣರು ಮಳೆಗಾಲ ಕಳೆಯುವುದಕ್ಕಾಗಿ ಋಷ್ಯಮೂಕ ಪರ್ವತದ ಗುಹೆಯಲ್ಲಿರುತ್ತಿದ್ದಾಗ ಒಂದು ದಿನ ಲಕ್ಷ್ಮಣನು ರಾಮನನ್ನು ಕುರಿತು ಕ್ರಿಯಾ ಮಾರ್ಗದ ಉಪದೇಶವನ್ನು ಪ್ರಾರ್ಥಿಸುವನು. ರಾಮನು ಪೂಜಾವಿಧಾನವನ್ನು ವಿಸ್ತಾರವಾಗಿ ವಿವರಿಸುವನು. (ಇದು ಸ್ಮೃತಿಗ್ರಂಥದ ಒಂದು ಭಾಗದಂತೆಯೇ ಇದೆ. ರಾಮ ಪೂಜಾವಿಧಾನಕ್ಕೆ ಸಂಬಂಧಪಟ್ಟ ಎಲ್ಲ ನಲಕರಣೆಗಳೂ ಉಕ್ತವಾಗಿವೆ.) ಹಾಗೆಯೇ ರಾಮನು ಕಾಮಬಾಧೆಯನ್ನು ನಟಿಸುತ್ತಿರುವಾಗ ಲಕ್ಷ್ಮಣನು ಮಾಯಾ ಸ್ವರೂಪವನ್ನು ಅವನಿಗೆ ಜ್ಞಾಪಿಸಿ ಸಮಾಧಾನ ಮಾಡುವನು.

ಸೀತಾನ್ವೇಷಣೆಗೆ ಪ್ರಾರಂಭವಾಯಿತು. ಮೂರು ದಿಕ್ಕಿಗೆ ಹೋಗಿದ್ದ ವಾನರರು ನಿರುತ್ಸಾಹಿಗಳಾಗಿ ಹಿಂತಿರುಗುವರು ದಕ್ಷಿಣದಿಕ್ಕಿಗೆ ಹೋಗಿದ್ದ ಅಂಗದ ಹನುಮಂತಾದಿಗಳು ಗುಹಾಪ್ರವೇಶ ಮಾಡಿ ಸ್ವಯಂಪ್ರಭೆಯಿಂದ ಸತ್ಕೃತರಾಗುವರು ಸ್ವಯಂಪ್ರಭೆಯು ರಾಮ ಸುಗ್ರೀವರ ವಿಷಯವನ್ನು ತಿಳಿದು ಅವರ ಸಂದರ್ಶನಕ್ಕಾಗಿ ಹೋಗುವಳು. ಸ್ವಯಂಪ್ರಭೆಯ ಪೂರ್ವವೃತ್ತಾಂತವು ಪೂರ್ಣವಾಗಿ ವರ್ಣಿತವಾಗಿದೆ. ಸ್ವಯಂಪ್ರಭೆಯು ರಾಮನಿಂದ ಲೋಕತತ್ತ್ವದ ಉಪದೇಶವನ್ನು ಪಡೆಯುವಳು.

ಹನುಮಂತಾದಿಗಳಿಗೆ ಸಂಪಾತಿಯ ದರ್ಶನವಾಗುವುದು. ಅವನಿಂದ ಅವನ ಪೂರ್ವಕಥೆಯೂ ಸೀತಾವಿಷಯವೂ ಪರಿಚಿತವಾಗುವುದು. ಹನುಮಂತನು ಸಾಗರನನ್ನು ದಾಟಿ ಲಂಕೆಯಲ್ಲಿ ಶಿಂಶುಪಾವೃಕ್ಷದ ಮೂಲದಲ್ಲಿ ಸೀತಾದೇವಿಯನ್ನು ಬಹು ದೀನಸ್ಥಿತಿಯಲ್ಲಿ ಕಾಣುವನು. ಆಗ ರಾವಣನು ಸೀತೆಯನ್ನು ನಾನಾ ರೀತಿಯಲ್ಲಿ ಪ್ರಲೋಭಿಸಿ ಕೃತಕೃತ್ಯನಾಗದೆ ಅವಳನ್ನು ಸಂಹರಿಸಲು ಯತ್ನಿಸುವನು. ಆಗ ಮಂಡೋದರಿಯು ಅದನ್ನು ನಿರೋಧಿಸಿ ರಾವಣನನ್ನು ಕರೆದೊಯ್ಯುವಳು. (ಇಲ್ಲಿಯ ಸೀತಾರಾವಣ ಸಂವಾದ ಬಹು ನಾಟಕೀಯವಾಗಿದೆ) ಸೀತಾದೇವಿಯು ತನ್ನ ವೇಣಿಯಿಂದಲೇ ಆತ್ಮಹತ್ಯ ಮಾಡಿಕೊಳ್ಳಲು ಯತ್ನಿಸುತ್ತಿದ್ದ ವೇಳೆಯಲ್ಲಿ ಹನುಮಂತನು ಕಾಣಿಸಿಕೊಂಡು ರಾಮನ ಕಥೆಯನ್ನು ಶ್ರುತಪಡಿಸಿ ಅಂಗುಲೀಯ ದಾನವನ್ನು ಮಾಡುವನು. ಅಶೋಕವನ ಭಂಗವಾಗುವುದು. ಹನುಮಂತ ರಾಕ್ಷಸ ಕುಮಾರರ ಯುದ್ಧವಾದ ಮೇಲೆ ಹನುಮಂತನು ರಾವಣನ ಆಸ್ಥಾನಕ್ಕೆ ಬಂಧಿತನಾಗಿ ಸೆಳೆದುಯ್ಯಲ್ಪಡುವನು. ಹನುಮಂತನು ರಾವಣನಿಗೆ ಸಂಸಾರದ ಅನಿತ್ಯತೆಯನ್ನು ಕಾಮದ ನಿಕೃಷ್ಟತೆಯನ್ನು ರಾಮನ ಪರತತ್ತ್ವವನ್ನು ತಿಳಿಯಪಡಿಸಿ ಸೀತೆಯನ್ನು ಒಪ್ಪಿಸಿ ರಾಮನಿಗೆ ಶರಣಾಗತನಾಗುವಂತೆ ಉಪದೇಶಿಸುವನು. ಅದನ್ನು ತಿರಸ್ಕರಿಸದ ರಾವಣನಿಂದ ಹನುಮಂತನ ಲಾಂಗೂಲ ದಗ್ಧವಾಗಿ ಲಂಕಾದಹನವಾಗುವುದು.

ಯುದ್ಧಕಾಂಡದ ಆದಿಯಲ್ಲಿ ರಾವಣನ ಆಲೋಚನಾಸಭೆಯು ಕೂಡುವುದು. ಕುಂಭಕರ್ಣನು ರಾವಣನ ಕಾರ್ಯವನ್ನು ಪ್ರತಿಭಟಿಸಿದರೂ ಅವನಿಗೆ ಸಹಾಯ ಮಾಡುವುದಾಗಿ ಹೇಳುವನು. ವಿಭೀಷಣನು ಹಿತವೂ ಪಥ್ಯವೂ ಪವಿತ್ರವೂ ಆದ ಅಭಿಪ್ರಾಯವನ್ನು ಸೂಚಿಸಿ, ರಾಮನ ಅವತಾರ ಮಹಿಮೆಯನ್ನು ಸವಿಸ್ತಾರವಾಗಿ ಶ್ರುತಪಡಿಸುವನು. ತಿರಸ್ಕೃತನಾದ ವಿಭೀಷಣನು ನಾಲ್ಕು ಜನ ಮಂತ್ರಿಗಳೊಡನೆ ರಾಮನಲ್ಲಿ ಶರಣಾಗತಿಯನ್ನು ಮಾಡುವನು. ಸುಗ್ರೀವನು ಮಾತ್ರ ತನ್ನ ಅಸಮಾಧಾನವನ್ನು ಸೂಚಿಸುವನು. ಆದರೆ ರಾಮನು 'ಸಕೃದೇವ ಪ್ರಪನ್ನಾಯ ತವಾಸ್ಮೀತಿಜಯಾಜಯೇ। ಅಭಯಂ ಸರ್ವಭೂತೇಭ್ಯೋ ವದಾಮ್ಯೇತದ್ವ್ರತಂ ಮಮ।' ಎಂದು ಹೇಳಿ ವಿಭೀಷಣನನ್ನು ಸ್ವೀಕರಿಸಿ ಅವನಿಗೆ ಬೇಕಾದ ವರವನ್ನು ಕೇಳಬಹುದೆಂದು ಹೇಳುವನು. ಅದಕ್ಕೆ ವಿಭೀಷಣನು 'ನಯಾಚೇ ರಾಯ ರಾಜೇಂದ್ರ ಸುಖಂ ವಿಷಯ ಸಂಭವಂ। ತ್ವತ್ಪಾದ ಕಮಲೇ ಸಕ್ತಾಭಕ್ತಿರೇವ ಸದಾಸ್ತು ಮೇ' ಎಂದು ಕೇಳಿ ಅಭಯವನ್ನು ಪಡೆಯುವನು.

ನಳನಿಂದ ಸೇತು ನಿರ್ಮಾಣವಾಗುವುದು ಅಲ್ಲಿ ರಾಮನು ರಾಮಲಿಂಗವನ್ನು ಸ್ಥಾಪಿಸಿ ಅದಕ್ಕೆ ನಮಸ್ಕಾರಮಾಡಿ ಹೊರಡುವನು. ರಾವಣನು ಶುಕನೆಂಬ ಚಾರನನ್ನು ಕಳುಹಿಸಿ ರಾಮಸೈನ್ಯದ ವಿವರವನ್ನು ಕೇಳುವನು ಶುಕನು ರಾವಣನಿಗೆ ಅವನು ಸೀತೆಯನ್ನು ತಂದುದು ಅಕಾರ್ಯವೆಂದೂ ಸಂಸಾರ ಅನಿತ್ಯವೆಂದೂ ಭೋಗಪರಾಙ್ಮುಖನಾಗಬೇಕೆಂದೂ ರಾಮನನ್ನೇ ಪರಾತ್ಪರನೆಂದು ಭಾವಿಸಬೇಕೆಂದು ತಿಳಿಸುವನು. ಕೋಪಾವಿಷ್ಟನಾದ ರಾವಣನಿಂದ ತಿರಸ್ಕೃತನಾಗಿ ಶುಕನು ಮನೆಗೆ ತೆರಳುವನು. (ಇಲ್ಲಿ ಶುಕನು ಪೂರ್ವದಲ್ಲಿ ಬ್ರಾಹ್ಮಣನಾಗಿದ್ದು ಅಗಸ್ತ್ಯರ ಶಾಪದಿಂದ ರಾಕ್ಷಸನಾದನೆಂಬ ಕಥೆ ವಿವೃತವಾಗಿದೆ ಶುಕನು ತನ್ನ ಶಾಪದಿಂದ ನಿವೃತ್ತನಾಗಿ ಪೂರ್ವದ ಬ್ರಾಹ್ಮಣ್ಯವನ್ನು ಪಡೆಯುವನು. ಇದೇ ಸಂದರ್ಭದಲ್ಲಿ ಮಾಲ್ಯವಂತನು ರಾವಣನಿಗೆ ಸೀತೆಯನ್ನು ಒಪ್ಪಿಸಿ ಅವನನ್ನು ಆಶ್ರಯಿಸಬೇಕೆಂದು ಉಪದೇಶಿಸಿ ರಾವಣನಿಂದ ತಿರಸ್ಕೃತನಾಗುವನು. ವಾಲ್ಮೀಕಿ ರಾಮಾಯಣದಲ್ಲಿ ಬರುವ ನಾಗಪಾಶ ಅದು ಗರುಡನಿಂದ ಮೋಕ್ಷವಾಗುವ ವಿಷಯ ಇಲ್ಲಿ ಉಕ್ತ

ವಾಗಿಲ್ಲ. ಎರಡು ಪಕ್ಷಗಳಿಗೂ ಯುದ್ಧವು ಪ್ರಾರಂಭವಾಗುವುದು. ಅನೇಕ ನಾಯಕರೂ ಲಕ್ಷ್ಮಣನೂ ಮೂರ್ಛಿತರಾಗುವರು. ರಾಮನು ಮನುಷ್ಯತ್ವವನ್ನು ಅಂಗೀಕರಿಸಿ ಲೀಲೆಗೋಸ್ಕರ ಶೋಕಿಸುವನು. ಆಗ ಅವರನ್ನು ಗುಣಪಡಿಸಲು ಸುಷೇಣನು ಹನುಮಂತನಿಗೆ ಔಷಧ ಪರ್ವತವನ್ನು ತರುವಂತೆ ಹೇಳುವನು. ಇದನ್ನು ತಿಳಿದ ರಾವಣನು ಕಾಲನೇಮಿಯೆಂಬ ರಾಕ್ಷಸನನ್ನು ಕರೆದು ಹನುಮಂತನಿಗೆ ವಿಘ್ನಮಾಡುವಂತೆ ಪ್ರೇರೇಪಿಸುವನು ಕಾಲನೇಮಿಯು ರಾವಣನನ್ನು ಕುರಿತು 'ಪುತ್ರಪೌತ್ರಾದಿಗಳೆಲ್ಲ ಹತವಾದರು. ಇನ್ನೇಕೆ ಈ ಹಟ. ಸೀತೆಯನ್ನು ರಾಮನಿಗೆ ಕೊಟ್ಟುಬಿಡು ಎಂದು ಬುದ್ಧಿ ಹೇಳುವನು. ರಾವಣನು ಅದಕ್ಕೆ ಒಪ್ಪದೆ ಅವನಿಗೆ ಭಯೋತ್ಪಾದನೆ ಮಾಡಲು ಕಾಲನೇಮಿಯು ಮನಸ್ಸಿಲ್ಲದ ಮನಸ್ಸಿನಲ್ಲಿ ಔಷಧಿ ಪರ್ವತದ ಸಮೀಪಕ್ಕೆ ಹೋಗಿ ಹನುಮಂತನಿಗೆ ವಿಘ್ನಮಾಡಲು ಹೊರಟು ಹನುಮಂತನಿಂದಲೇ ಸಂಹೃತನಾಗುವನು. ಹನುಮಂತನು ಅಲ್ಲಿದ್ದ ದ್ರೋಣಪರ್ವತವನ್ನೇ ಲಂಕೆಗೆ ಕೊಂಡೊಯ್ಯುವನು. ಓಷಧೀಮೂಲಿಕೆಯ ಪ್ರಯೋಗದಿಂದ ಲಕ್ಷ್ಮಣಾದಿಗಳು ನಿರಾಮಯರಾಗಿ ಎದ್ದೇಳುವರು.

ಈಗ ರಾವಣನು ರಾಮನು ಸಾಕ್ಷಾನ್ನಾರಾಯಣನೆಂದೂ ಅವನಿಂದ ತಾನು ಹತನಾಗುವುದು ಸತ್ಯವೆಂದೂ ಸ್ಥಿರಪಡಿಸಿಕೊಂಡು ಕೊನೆಯ ಪ್ರಯತ್ನವಾಗಿ ಕುಂಭಕರ್ಣನನ್ನು ಎಬ್ಬಿಸುವನು. (ಆದರೆ ಇಲ್ಲಿ ವಾಲ್ಮೀಕಿ ರಾಮಾಯಣದಂತೆ ಕುಂಭಕರ್ಣನನ್ನು ಎಚ್ಚರಿಸುವುದಕ್ಕೆ ಮಾಡಿದ ಸಾಹಸವರ್ಣನೆ ಯಾವುದೂ ಇಲ್ಲ) ಕುಂಭಕರ್ಣನಿಗೆ ಹಿಂದೆಯೇ ಶ್ರೀರಾಮನು ಅವರನ್ನೆಲ್ಲ ಸಂಹಾರಮಾಡುವನೆಂದೂ ಅವನಿಂದಲೇ ಮೋಕ್ಷಸಿದ್ಧವೆಂದೂ ನಾರದರಿಂದ ಉಪದೇಶಿಸಲ್ಪಟ್ಟಿರುವುದು. ಆದುದರಿಂದ ರಾಮನೊಡನೆ ಯುದ್ಧಮಾಡುವುದು ಶ್ರೇಯಸ್ಕರವೆಂದು ಭಾವಿಸಿ ಯುದ್ಧಭೂಮಿಗೆ ಹೊರಟು ಅಲ್ಲಿ ತಮ್ಮನಾದ ವಿಭೀಷಣನನ್ನು ಸಂದರ್ಶಿಸಿ ಅವನು ರಾಮನ ಆಶ್ರಯದಲ್ಲಿಯೇ ಇದ್ದು ಅವನ ಸಹಾಯದಿಂದಲೇ ತಮ್ಮ ವಂಶವನ್ನು ಉದ್ಧಾರಮಾಡಬೇಕೆಂದು ಕೇಳಿಕೊಳ್ಳುವನು. ರಾಮ ಕುಂಭಕರ್ಣರ ಯುದ್ಧವಾಗುವುದು. ಕುಂಭಕರ್ಣನು ರಾಮನಿಂದ ವಧಿಸಲ್ಪಡುವನು. ಆಗ ನಾರದರು ಬಂದು ರಾಮನನ್ನು ನಾನಾರೀತಿಯಲ್ಲಿ ಸ್ತೋತ್ರ ಮಾಡುವರು.

ಮುಂದೆ ಇಂದ್ರಜಿತುವಿನ ವಧೆಯಾಗಬೇಕು. ಅದನ್ನು ಕ್ಷಣಮಾತ್ರದಲ್ಲಿ ರಾಮನು ನಿರ್ವಹಿಸಬಲ್ಲ ಶಕ್ತಿಯುಳ್ಳವನಾಗಿದ್ದನು. ಆದರೆ ಅವನು ಲಕ್ಷ್ಮಣನಿಂದಲೇ ಸಂಹರಿಸಲ್ಪಡಬೇಕೆಂದು ಬ್ರಹ್ಮನಿಂದ ನಿಷ್ಕರ್ಷಿತವಾಗಿದ್ದಿತು. ಆದಕ್ಕಾಗಿಯೇ ಅವನು ಹನ್ನೆರಡುವರ್ಷಗಳಿಂದ ನಿದ್ರಾಹಾರವನ್ನು ತೊರೆದು ವ್ರತಾಚರಣೆಯಲ್ಲಿದ್ದನು. ಅದಕ್ಕನುಗುಣವಾಗಿಯೇ ರಾಮನು ಆ ಕಾರ್ಯವನ್ನು ಲಕ್ಷ್ಮಣನಿಗೇ ವಹಿಸಿದನು ಅವನೂ 'ಧರ್ಮಾತ್ಮಾಸತ್ಯಸಂಧಶ್ಚರಾಮೋ ದಾಶರಥಿರ್ಯದಿ। ಪೌರುಷೇಣಾಪ್ರತಿದ್ವಂದ್ವಂ ಶರೈನಂ ಜಹಿ ರಾವಣಿಂ' ಎಂದು ಹೇಳಿ ಅದರ ಸಹಾಯದಿಂದಲೇ ಇಂದ್ರಜಿತನನ್ನು ಸಂಹಾರಮಾಡಿದನು. ನಿನ್ನ ಪ್ರಭಾವದಿಂದಲೇ ಇದು ಸಾಧ್ಯವಾಯಿತೆಂದು ಹೇಳಿ ನಮಸ್ಕರಿಸಿದ ಲಕ್ಷ್ಮಣನನ್ನು ರಾಮನು ಮೂರ್ಧ್ನವಘ್ರಾಣಮಾಡುವನು ಪುತ್ರವಧ ಸಂತಪ್ತನಾದ ರಾವಣನು ಸೀತೆಯನ್ನೇ ಕೊಲ್ಲಲು ಯತ್ನಿಸುವನು. ಅದನ್ನು ಸುಪಾರ್ಶ್ವನೆಂಬ ಮೇಧಾವಿಯು ಅದನ್ನು ತಪ್ಪಿಸಿದನು

ಬಂಧುಮಿತ್ರರೆಲ್ಲ ನಾಶವಾದಮೇಲೆ ರಾವಣನಿಗೆ ರಾಮನ ಮತ್ತು ಅವನ ಪರಿವಾರದವರ ಪರಾಕ್ರಮವು ಅರಿವಾಯಿತು. ಆಗ ಏನುಮಾಡಬೇಕೆಂದು ಆಚಾರ್ಯರಾದ ಶುಕ್ರಾಚಾರ್ಯರನ್ನು ಪ್ರಾರ್ಥಿಸುವನು. ಅದಕ್ಕೆ ಅವರು ರಹಸ್ಯವಾಗಿ ಹೋಮವನ್ನು ಮಾಡಬೇಕೆಂದು ಅದಕ್ಕೆ ಯಾರ ವಿಘ್ನವೂ ಬರದಿದ್ದರೆ ಯಜ್ಞಕುಂಡದಿಂದ ಮಹತ್ತರವಾದ ರಥವೊಂದು ಕುದುರೆ, ಬಾಣ ಬತ್ತಳಿಕೆಗಳೊಡನೆ ಉದ್ಭವವಾಗುವುದೆಂದೂ ಅದರಿಂದ ಅವನು ಅಜೇಯನಾಗುವನೆಂದೂ ತಿಳಿಸಿ ಅದಕ್ಕೆ ಸೂಕ್ತವಾದ ಮಂತ್ರೋಪದೇಶಮಾಡಿ ಕಳುಹಿಸಿದರು.

ಅದರಂತೆ ರಾವಣನು ಬಹು ರಹಸ್ಯವಾಗಿ ಒಂದು ಮನೆಯಲ್ಲಿ ಹೋಮವನ್ನು ಪ್ರಾರಂಭಿಸುವನು. ಅದರಿಂದ ಹೊರಟ ಹೊಗೆಯನ್ನು ನೋಡಿದ ವಿಭೀಷಣನು ರಾಮನ ಅನುಜ್ಞೆಯನ್ನು ಪಡೆದು ಆ ಹೋಮವು ಪೂರ್ಣವಾಗದಂತೆ ಮಾಡಲು ದೊಡ್ಡ ಸೈನ್ಯದೊಡನೆ ಹೊರಡುವನು. ಹನುಮಂತಾದಿಗಳು ರಾವಣನ ಚತುರಂಗ ಸೈನ್ಯವನ್ನು ಪುಡಿಪುಡಿ ಮಾಡುವರು. ಆಗ ವಿಭೀಷಣನ ಹೆಂಡತಿಯಾದ ಸುರಮೆಯು ರಾವಣನು ಹೋಮ ಮಾಡುತ್ತಿದ್ದ ಗುಹೆಯನ್ನೂ ತೋರಿಸಿಕೊಡುವಳು. ಅಂಗದನು ಆ ಗುಹೆಯನ್ನು ಪ್ರವೇಶಿಸಿ ಧ್ಯಾನಾರೂಢನಾದ ರಾವಣನನ್ನು ಲಕ್ಷಿಸದೆ ಅಲ್ಲಿಯ ಸಲಕರಣೆಗಳನ್ನು ನಾಶಮಾಡಿ ಹೋಮಕುಂಡವನ್ನು ಧ್ವಂಸಮಾಡುವನು. ಹನುಮಂತಾದಿಗಳು ಧ್ಯಾನಾಸಕ್ತನಾದ ರಾವಣನನ್ನೇ ಹೊಡೆದು ಕಚ್ಚಿ, ತುಳಿದು ಹಿಂಸಿಸುವರು. ರಾವಣನು ಸ್ವಲ್ಪವೂ ವಿಚಲಿತನಾಗುವುದಿಲ್ಲ. ಅಂಗದನು ರಾವಣನ ಅಂತಃಪುರಕ್ಕೆ ಹೋಗಿ ಅವನ ಪತ್ನಿಯಾದ ಮಂಡೋದರಿಯನ್ನು ಸೆಳೆದುಕೊಂಡು ಬಂದು ರಾವಣನೆದುರಿನಲ್ಲಿಯೇ ನಾನಾರೀತಿಯಾಗಿ ಪರಿಭವಿಸುವನು. ಅವಳು ತನಗಾದ ಅಪಮಾನಕ್ಕಾಗಿ ವಿವಿಧ ರೀತಿಯಲ್ಲಿ ರೋಧಿಸುವಳು. ವಾನರರು ರಾವಣನನ್ನೇ ಕುರಿತು ನಿನ್ನೆದುರಿಗೇ ನಿನ್ನ ಹೆಂಡತಿಗೆ ಇಷ್ಟು ಮಾನಭಂಗವಾದರೂ ನಿನಗೆ ನಾಚಿಕೆಯಾಗುವುದಿಲ್ಲವೇ ಎಂದು ಹೀಯ್ಯಾಳಿಸುವರು. ರಾವಣನು ಈ ಹಿಂಸೆಯನ್ನು ತಡೆಯಲಾರದೆ ರೋಷಾವಿಷ್ಟನಾಗಿ ಖಡ್ಗಪಾಣಿಯಾಗಿ ಎದ್ದು ವಾನರರನ್ನೆಲ್ಲ ಓಡಿಸುವನು. ಉದ್ದಿಷ್ಟಕಾರ್ಯವಾದ ಯಜ್ಞವಿಘ್ನವು ಪೂರ್ಣವಾಗುವುದು.

ಆಗ ರಾವಣನು ಮಂಡೋದರಿಯನ್ನು ಕುರಿತು ಶೋಕವು ಅಜ್ಞಾನ ಮೂಲವೆಂದೂ ತಾನು ಅಜ್ಞಾನದಿಂದ ಅಪಹರಿಸಿ ತಂದ ಸೀತೆಯನ್ನು ಕೊಂದು ತಾನೂ ಯುದ್ಧದಲ್ಲಿ ಮಡಿಯುವೆನೆಂದೂ ಮಂಡೋದರಿಯು ಅಗ್ನಿಪ್ರವೇಶಮಾಡಿ ಊರ್ಧ್ವಲೋಕದಲ್ಲಿ ತನ್ನನ್ನು ಸೇರಬೇಕೆಂದೂ ತಿಳಿಸುವನು. ಮಂಡೋದರಿಯು ಸೀತೆಯನ್ನು ಕೊಲ್ಲುವುದು ಅಸಾಧ್ಯವೆಂದೂ ರಾಮನು ದಶಾವತಾರವನ್ನು ಧರಿಸಿದ ಶ್ರೀ ಮಹಾವಿಷ್ಣುವೆಂದೂ ಸೀತೆಯನ್ನು ರಾಮನಿಗೆ ಒಪ್ಪಿಸುವುದೇ ಶ್ರೇಯಸ್ಕರವೆಂದೂ ಬುದ್ಧಿಹೇಳುವಳು. ಪುತ್ರಪೌತ್ರ, ಬಂಧು ಪರಿವಾರವನ್ನು ಕಳೆದುಕೊಂಡ ರಾವಣನು ತಾನು ಹಾಗೆ ಮಾಡುವುದಕ್ಕಾಗುವುದಿಲ್ಲವೆಂದೂ ರಾಮನು ಸಾಕ್ಷಾನ್ನಾರಾಯಣನೆಂದು ತಿಳಿದೇ ಅವನೊಡನೆ ಯುದ್ಧಮಾಡಿ ಮೋಕ್ಷ ಪಡೆಯುವುದಾಗಿ ಹೇಳುತ್ತಾನೆ. ರಾಮರಾವಣರ ಘೋರ ಯುದ್ಧವಾಗುವುದು ರಾವಣನು ರಾಮನಿಂದ ಹತನಾಗುವನು. ದೇವತೆಗಳೆಲ್ಲ ನೋಡುತ್ತಿದ್ದಂತೆಯೇ ರಾವಣನಿಂದ ಹೊರಟ ತೇಜಸ್ಸು ರಘುಶ್ರೇಷ್ಠನನ್ನೇ ಪ್ರವೇಶಿಸುವುದು. ರಾವಣನು ರಾಮನನ್ನು ದ್ವೇಷಬುದ್ಧಿಯಿಂದಲಾದರೂ ಸದಾ ಸ್ಮರಿಸುತ್ತಾ ಅವನ ಕೈಯಿಂದಲೇ ಮರಣ ಹೊಂದಿದುದರಿಂದ ಅವನಿಗೆ ಪರಮಪದ ಪ್ರಾಪ್ತಿಯಾಯಿತೆಂದು ದೇವತೆಗಳೆಲ್ಲ ಸಂತೋಷಪಡುವರು.

ಪಾಪಿಷ್ಠೋ ವಾ ದುರಾತ್ಮಾ ಪರಧನ
ಪರದಾರೇಷು ಸಕ್ತೋ ಯದಿಸ್ಯಾತ್
ನಿತ್ಯಂ ಸ್ನೇಹಾತ್ ಭಯಾದ್ವಾ ರಘುಕುಲ
ತಿಲಕಂ ಭಾವರ್ಯಸಂವರೇತಃ

ಭೂತ್ವಾ ಶುದ್ಧಾಂತರಂಗಃ, ಭವಶತ
ಜನಿತಾನೇಕ ದೋಷೈರ್ವಿಮುಕ್ತಃ
ಸದ್ಯೋರಾಮಸ್ಯವಿಷ್ಣೋಃ ಸುರವರವಿನುತಂ
ಯಾತಿ ವೈಕುಂಠ ಮಾದ್ಯಂ ॥

ಮುಂದೆ ವಿಭೀಷಣನ ಪಟ್ಟಾಭಿಷೇಕವಾಗುವುದು. ರಾಮನು ಮಾಯಾ ಸೀತೆಯನ್ನು ತ್ಯಜಿಸಿ ಅಗ್ನಿಷ್ಠಳಾಗಿದ್ದ ಜಾನಕಿಯನ್ನು ಪಡೆಯುವುದಕ್ಕಾಗಿ ಮಾಯಾಸೀತೆಯ ಅಗ್ನಿಪ್ರವೇಶಕ್ಕೆ

( 36ನೇ ಪುಟ ನೋಡಿ )

"ದೇವರ ಸಾಕಾರ ರೂಪ ಮಕ್ಕಳು."

ಮಕ್ಕಳು ಅನೇಕ ವಿಷಯಗಳಲ್ಲಿ ಪರಮಾತ್ಮನನ್ನು ಹೋಲುತ್ತವೆ. ಮನುಷ್ಯ ಕಲ್ಪನೆಯ ಪರಮಾತ್ಮ ಪ್ರಶಾಂತರೂಪಿ. ರಾಗದ್ವೇಷಗಳಿಗೆ ಅತೀತ ಹಾಗೆಯೇ ಮಕ್ಕಳಿಗೆ ಯಾರೂ ಶತ್ರುಗಳಲ್ಲ, ದ್ವೇಷಿಸುವುದನ್ನು ಕಲಿಸುವವರೆಗೆ ಪ್ರೀತಿಯಿಂದ ಯಾರು ಕರೆದರೂ ನಗು ನಗುತ್ತಾ ಅವರ ಮಡಿಲನ್ನು ಸೇರುತ್ತವೆ. ಪರಮಾತ್ಮನನ್ನೂ ಭಕ್ತಿಯಿಂದ ಕರೆದರೆ, ಓ ಎಂದು ಕರೆದವರಲ್ಲಿಗೆ ಬರುವನಂತೆ. ಯೋಗ ನಿದ್ರೆಯಲ್ಲೇ ಹೆಚ್ಚು ಕಾಲ ಕಳೆಯುವ ಪರಮಾತ್ಮನಿಗೆ ಕಾಲಮಾನವಿಲ್ಲ, ಜೊತೆಗೆ ಆ ಯೋಗ ನಿದ್ರೆಯಲ್ಲಿ ಸೃಷ್ಟಿ ಸ್ಥಿತಿ ಲಯಗಳು ಹೇಗೆ ನಡೆಯಬೇಕೆಂದು ಕಲ್ಪಿಸುವನೋ ಆ ಯೋಗಮೂರ್ತಿಗೇ ಗೊತ್ತು. ಅಂತೆಯೇ ಹೆಚ್ಚು ಕಾಲ ನಿದ್ರಿಸುವ ಮಗು ನಿದ್ರೆಯಲ್ಲಿ ಒಮ್ಮೆ ನಕ್ಕು ಮತ್ತೊಮ್ಮೆ ಅಳುಮುಖ ಮಾಡುವುದರ ಮರ್ಮ ಆ ಶಿಶು ರೂಪಿ ಪರಮಾತ್ಮನಿಗೇ ಗೊತ್ತು. ದೇವನನ್ನು ಒಲಿಸಿಕೊಳ್ಳುವ ಏಕೈಕ ಮಾರ್ಗ ಹೃತ್ಪೂರ್ವಕ ಭಕ್ತಿ ಮಕ್ಕಳನ್ನು ಒಲಿಸಿಕೊಳ್ಳುವ ಮಾರ್ಗ ಅಂತಃಕರಣಭರಿತವಾದ ಪ್ರೀತಿ. ಹೀಗೆಯೇ ನೋಡುತ್ತಾ ಹೋದರೆ, ದೇವನಿಗೂ ಹಾಗು ಮಕ್ಕಳಿಗೂ ವ್ಯತ್ಯಾಸಗಳಿಗಿಂತಲೂ ಹೋಲಿಕೆಗಳೇ ಹೆಚ್ಚು ಕಂಡುಬರುತ್ತವೆ.

ಮಕ್ಕಳ ಬಾಲ ಲೀಲೆಗಳು ಎಂತಹ ಕಠಿಣ ಹೃದಯಗಳನ್ನು ಮೃದುವಾಗಿಸುತ್ತವೆ ಬೆಳೆದ ಮಕ್ಕಳಿಗಿಂತಲೂ ಪ್ರಪಂಚದ ಯಾವುದೇ ಅರಿಷಡ್ವರ್ಗಗಳಿಂದ ಮುಕ್ತವಾದ ಬಾಲ್ಯಾವಸ್ಥೆಯಲ್ಲಿ ಮಕ್ಕಳು ತಂದೆತಾಯಿಯರಿಗೆ ಆನಂದವನ್ನುಂಟು ಮಾಡುವುದರೊಂದಿಗೆ, ಅಸಹಾಯಕ ಪರಿಸ್ಥಿತಿಗಳನ್ನು ತಂದೊಡ್ಡುತ್ತವೆ. ಇಂತಹ ಪರಿಸ್ಥಿತಿಗಳು ಯುಗಾಂತರಗಳಿಂದಲೂ ಒಂದೇ ಸಮನೆ ವ್ಯತ್ಯಾಸಗೊಳ್ಳದೇ ನಡೆದು ಬರುತ್ತಿದೆ. ಧರ್ಮ ಸಂಸ್ಥಾಪನೆಗೆ ಅವತರಿಸಿದ ಅವತಾರ ಪುರುಷರೂ ಇದರಿಂದ ಹೊರತೇನಲ್ಲ. ಇದಕ್ಕೆ ಉದಾಹರಣೆಯಾಗಿ ಶ್ರೀರಾಮಚಂದ್ರನ ಬಾಲ್ಯವನ್ನು ತೆಗೆದುಕೊಳ್ಳಬಹುದು.

ವಾಲ್ಮೀಕಿ ಮಹರ್ಷಿಯಿಂದ ರಚನೆಗೊಂಡ ಶ್ರೀ ರಾಮಾಯಣ ಕಾವ್ಯ, ನಂತರ ಭಾರತೀಯ ಎಲ್ಲಾ ಭಾಷೆಗಳಲ್ಲೂ ರಚನೆಗೊಂಡಿತು. ಕನ್ನಡ ಭಾಷೆಯಲ್ಲಿ ಜೈನ ಕವಿಗಳು ಮತ್ತು ವೈಷ್ಣವ ಕವಿಗಳು ಅವರವರ ಮನೋಧರ್ಮಕ್ಕನುಗುಣವಾಗಿ ಬದಲಾಯಿಸಿಕೊಂಡು ಕಾವ್ಯಗಳನ್ನು ರಚಿಸಿದರು. ಈ ಎಲ್ಲ ರಚನೆಗಳಿಗಿಂತಲೂ ಕುವೆಂಪುರವರ "ಶ್ರೀರಾಮಾಯಣ ದರ್ಶನಂ" ಭಾರತೀಯನ ಭಾವನೆಗಳಿಗೆ ಧಕ್ಕೆಯಾಗದಂತೆ ಇದ್ದರೂ, ಇರಬಹುದಾದ ಕಾಳಿಕೆಗಳನ್ನು ಕಳೆದುಕೊಂಡು ವಾಚಕನ ಹೃನ್ಮನಗಳನ್ನು ತಣಿಸುತ್ತದೆ. ಕುಮಾರವ್ಯಾಸ ಮಹಾಕವಿಯ ಬಗ್ಗೆ ಕುವೆಂಪುರವರು "ಕುಮಾರವ್ಯಾಸನು ಹಾಡಿದನೆಂದರೆ ಕಲಿಯುಗ ದ್ವಾಪರವಾಗುವುದು" ಎಂದಿದ್ದಾರೆ. ಹಾಗೆಯೇ "ಕುವೆಂಪು ಹಾಡಿದರೆಂದರೆ ಕಲಿಯುಗ ತ್ರೇತಾ ಆಗುವುದು" ಎಂದು ನಾವು ಹಾಡುವಂತಿದೆ "ಶ್ರೀ ರಾಮಾಯಣ ದರ್ಶನಂ".

ಈ ಮಹಾಕಾವ್ಯದ ಒಂದನೇ ಸಂಚಿಕೆಯ "ಕವಿಕ್ರತು ದರ್ಶನಂ"ನಲ್ಲಿ ಶ್ರೀರಾಮಚಂದ್ರನ ಅವತಾರ ಮತ್ತು ಬಾಲ್ಯಗಳನ್ನು ವರ್ಣಿಸಿರುವ ಕವಿ, ಮಗು ರಾಮಚಂದ್ರನ ಮಹತ್ತರ ಬಯಕೆ, ಚಕ್ರವರ್ತಿಯಾದರೂ ಮಗುವಿನ ಆಸೆಯನ್ನು ತೀರಿಸಲಾರದೆ ತನ್ನ ಅಸಹಾಯಕ ಸ್ಥಿತಿಯಿಂದಾಗಿ ಮರುಗುವ ತಂದೆ ತಾಯಿಯರ ಆವೇದನೆ, ವಾಚಕ ತಂದೆತಾಯಿಯರನ್ನು ಮತ್ತು ಮಕ್ಕಳನ್ನು ತ್ರೇತಾಯುಗದ ದಶರಥ ಚಕ್ರವರ್ತಿಯ ಉದ್ಯಾನಕ್ಕೆ ಕೊಂಡೊಯ್ಯುತ್ತದೆ. ಕಾವ್ಯದ ಪ್ರತಿ ಅಕ್ಷರವೂ ರಸಪೂರ್ಣತೆಯಿಂದ ಇರುವುದರಿಂದಲೇ ಈ ವಿಶ್ವಕಾವ್ಯವನ್ನು ರಸರ್ಷಿ ಎನ್ನುವುದು. ಇಲ್ಲಿ ಶ್ರೀರಾಮಚಂದ್ರನ ಬಾಲ್ಯದ ವರ್ಣನೆಯ ಪರಿಚಯ ಮಾತ್ರ ಮಾಡಿದ್ದೇನೆ. ಏಕೆಂದರೆ ಕುವೆಂಪುರವರೇ ಒಂದೆಡೆ ಹೇಳಿರುವಂತೆ ಕವಿ ಏರುವೆತ್ತರಕೆ ವಿಮರ್ಶಕನೂ ಏರಿದಾಗ ಮಾತ್ರ ಕೃತಿಯನ್ನು ದರ್ಶಿಸಬಹುದು. ಇಲ್ಲಿ ವಿಶ್ವರೂಪಿ ಶ್ರೀಕೃಷ್ಣನನ್ನು ಅರ್ಜುನ ನಿಂತು ನೋಡಿದಂತೆ ಮಾತ್ರ ನೋಡಲಾಗಿದೆ.

# ಕುವೆಂಪು ಚಿತ್ರಿಸಿದ ಬಾಲಕ ರಾಮಚಂದ್ರ

ವೃದ್ಧಾಪ್ಯಕ್ಕೆ ಹತ್ತಿರವಾಗುತ್ತಿದ್ದರೂ ಮಕ್ಕಳಿಲ್ಲದ ಚಕ್ರವರ್ತಿ ದಶರಥ, ಕುಲ ಪುರೋಹಿತರೂ, ಸಪ್ತರ್ಷಿಗಳಲ್ಲೊಬ್ಬರೂ ಆದ ವಶಿಷ್ಠ ಮಹರ್ಷಿಗಳಿಂದ ಉಪದೇಶಗೊಂಡಂತೆ 'ಪುತ್ರಕಾಮೇಷ್ಟಿ ಯಾಗ'ವನ್ನು ಮಾಡಿದನು. ಅಗ್ನಿದೇವನು ಯಜ್ಞವೇದಿಯಿಂದೆದ್ದು ಬಂದು ಪಾಯಸ ಪೂರ್ಣ ಪಾತ್ರೆಯನ್ನು ನೀಡಿ ಅದನ್ನು ಮೂವರು ರಾಣಿಯರಿಗೂ ನೀಡುವಂತೆ ಆದೇಶಿಸಿ ಅದೃಶ್ಯನಾದನು. ಅಗ್ನಿದೇವನಾಜ್ಞೆಯಂತೆ ದಶರಥನು ಪಾಯಸವನ್ನು ತನ್ನ ಮೂವರು ರಾಣಿಯರಿಗೂ ಸ್ವೀಕರಿಸವಂತೆ ಆದೇಶಿಸಿದನು ಅಗ್ನಿ ದೇವನಾಜ್ಞೆಯಂತೆ ದಶರಥನಿಂದ ಪಾಯಸವನ್ನು ಸ್ವೀಕರಿಸಿದ ಕೌಸಲ್ಯೆ, ಸುಮಿತ್ರೆ, ಕೈಕೇಯಿಯರಿಗೆ ನವಮಾಸಗಳು ತುಂಬುತ್ತಿರಲು ರಾಮೋದಯವಾಗುವುದೆಂದು ಸೃಷ್ಟಿಯೂ ಹಿರಿ ಹಿರಿ ಹಿಗ್ಗ ತೊಡಗಿತು.

ನಲಿಯಿತು ಅಯೋಧ್ಯೆ,ಪೃಥ್ವಿಯೇ ನಲಿಯಿತು ಬೇಸಿಗೆಯ ಬೇಗೆಯನ್ನು ನೀಗಲೆಂಬಂತೆ ನೀರ್ಮೋಡಗಳು ಆಕಾಶದಲ್ಲೆಲ್ಲಾ ತುಂಬಿದವು. ರಾಮಚಂದ್ರನ ಆಗಮನದೊಂದಿಗೆ ಹೊಸ ಮಳೆಯೂ ಬರುವುದೆಂದು ಸೂಚಿಸಲು ಗಾಳಿ ತಂಪಾಗಿ ಬೀಸತೊಡಗಿತು. ಹುಣ್ಣಿಮೆಯ ಚಂದ್ರನನ್ನು ನೋಡಿ ಸಮುದ್ರ ಉಕ್ಕುವಂತೆ ರಾಮೋದಯವಾಗುವುದೆಂದು ನೆರೆಯೇರಿ ತುಂಬಿ ತುಳುಕಿದವು ಕೆರೆಗಳು. ಸರಯೂನದಿಯೆಡೆಗೆ ಎಡೆಬಿಡದೆ ಬರಲಾರಂಭಿಸಿದವು ಕ್ರೌಂಚ, ಸಾರಸ ಹಂಸ ಕಾರಂಡ ತತಿ. ನವ ವರ್ಷದೊಂದಿಗೆ ನವಯುಗ ಪ್ರಾರಂಭವಾಗುವುದೆಂದು ಚಿಗುರಿನಿಂದ ಸಿಂಗರಿಸಿಕೊಂಡತ್ತಿತ್ತು ಕಾಡು. ಇಡೀ ಸೃಷ್ಟಿಯೇ ನವಯುಗಾರಂಭವನ್ನು ಸೂಚಿಸುತ್ತಾ, ಸ್ವಾಗತಕ್ಕಣಿಯಾಗುತ್ತಿರುವಂತಿರಲು ಒಂದು ದಿನ–

ಕೌಸಲ್ಯಾದೇವಿ ಕನಸೊಂದನ್ನು ಕಂಡಳು.

ಹಾಲ್ಗಡಲ ತೆರೆಗಳ ಮೇಲೆ ಚಂದ್ರನಂತೆ ಪ್ರಕಾಶಿಸುವ ಒಂದು ಶಿಶು ನಗು ನಗುತ್ತಾ, ತೇಲುತ್ತಾ, ದಡಕ್ಕೆ ಬರಲು ಕೌಸಲ್ಯೆ ಕೈಚಾಚಿ ಕರೆಯಲು ಆ ಮೋಹಕ ಶಿಶು ಬಂದು ಆಕೆಯ ತೊಡೆಯೇರಿತು ತನ್ನ ಚಿಗುರಿನಂತ ಕೈಗಳಿಂದ ಅಪ್ಪುತ್ತಾ. ಆ ಅಪ್ಪುಗೆಯ ದಿವ್ಯಾನುಭೂತಿಯ ಆನಂದದಲ್ಲಿ ಮೈ ಮರೆತಳು ಕೌಸಲ್ಯೆ. ಮರುದಿನ ನವಮಿಯಂದು ಶುಭ ಮುಹೂರ್ತದಲ್ಲಿ ಶ್ರೀ ರಾಮೋದಯವಾಯಿತು. ಶ್ರೀ ರಾಮನ ನಂತರ ಕೈಕೇಯಿಯುದರದಲಿ ಹುಟ್ಟಿದನು ಭರತ. ಲಕ್ಷ್ಮಣ,

ಶ್ರೀ ಮು. ಕೃಷ್ಣಪ್ಪ, ಬಿ.ಎ.

# ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯ

## ಮಂಗಾಪುರ.

ಶ್ರೀ ವೆಂಕಟೇಶ್ವರಸ್ವಾಮಿ ಪದ್ಮಾವತಿಯನ್ನು ವಿವಾಹವಾದ ಬಳಿಕ ತಿರುಮಲೆಗೆ ಆಗಮಿಸುವ ಮುನ್ನ ಆರುತಿಂಗಳಕಾಲ ತಂಗಿದ್ದ ಸ್ಥಳ. ತಿರುಮಲೆಯಲ್ಲಿನ ಧ್ರುವಮೂರ್ತಿಗಿಂತ 2 ಅಡಿ ಹೆಚ್ಚು ಎತ್ತರದ ಧ್ರುವಮೂರ್ತಿ ಇಲ್ಲಿದ್ದು, ಈ ಗುಡಿಯನ್ನು ಹಾದು ತಿರುಮಲೆಗೆ ಮೆಟ್ಟಿಲ ಮೂಲಕ ಏರಬಹುದು. ತಿರುಪತಿ-ಮದನಪಲ್ಲಿ ರಸ್ತೆಯಲ್ಲಿ ತಿರುಪತಿಯಿಂದ ಆರು ಮೈಲಿದೂರದ ಶ್ರೀನಿವಾಸ ಮಂಗಾಪುರಕ್ಕೆ ಚಂದ್ರಗಿರಿ ಹಾಗೂ ತಿರುಪತಿಗಳಿಂದ ಬಸ್ ಸೌಕರ್ಯವಿದೆ.

### ದರ್ಶನ ಹಾಗೂ ಸೇವಾ ವಿವರಗಳು

| | ಭಾನು, ಸೋಮ, ಮಂಗಳ, ಬುಧ, ಗುರು ಹಾಗೂ ಶನಿವಾರಗಳ ಕಾರ್ಯಕ್ರಮ. | | ಶುಕ್ರವಾರಗಳಲ್ಲಿ | |
|---|---|---|---|---|
| ಸುಪ್ರಭಾತ | ಪ್ರಾ 5–00 | ಪ್ರಾ 5–30 | ಪ್ರಾ 5–00 | ಪ್ರಾ 5–30 |
| ವಿಶ್ವರೂಪ ಸರ್ವದರ್ಶನ | ಪ್ರಾ 5–30 | ಪ್ರಾ 6–00 | ಪ್ರಾ 5–30 | ಪ್ರಾ 6–00 |
| ತೋಮಾಲ, ಕೊಲುವು ಪಂಚಾಂಗಶ್ರವಣ | ಪ್ರಾ 6–00 | ಪ್ರಾ 6–30 | ಪ್ರಾ 6–00 | ಪ್ರಾ 6–30 |
| ಸಹಸ್ರನಾಮಾರ್ಚನೆ | ಪ್ರಾ 6–30 | ಪ್ರಾ 7–00 | ಪ್ರಾ 6–30 | ಪ್ರಾ 7–00 |
| ಮೊದಲನೇ ಗಂಟೆ | ಪ್ರಾ 7–00 | ಪ್ರಾ 7–30 | ಪ್ರಾ 7–00 | ಪ್ರಾ 7–30 |
| ಸರ್ವದರ್ಶನ | ಪ್ರಾ 7–30 | ಪ್ರಾ 10–00 | *ಅಭಿಷೇಕ ಪ್ರಾ 7–30 | ಪ್ರಾ 8–30 |
| | | | ಸಮರ್ಪಣ ಪ್ರಾ 8–30 | ಪ್ರಾ 9–30 |
| 2ನೇ ಅರ್ಚನೆ | | | | |
| 2ನೇ ಗಂಟೆ | ಪ್ರಾ 10–00 | ಪ್ರಾ 10–30 | ಪ್ರಾ 9–30 | ಪ್ರಾ 10–30 |
| *ಆರ್ಜಿತ ಕಲ್ಯಾಣೋತ್ಸವ | ಪ್ರಾ 10–30 | ಮ 12–00 | ಪ್ರಾ 10–30 | ಮ 12–00 |
| ಸರ್ವದರ್ಶನ | ಪ್ರಾ 10–30 | ಸಂ 6–30 | ಪ್ರಾ 10–30 | ಸಂ 6–30 |
| ರಾತ್ರಿ ಕೈಂಕರ್ಯ | | | | |
| ರಾತ್ರಿ ಗಂಟೆ | ಸಂ 6–30 | ರಾ 7–00 | ಸಂ 6–30 | ರಾ 7–00 |
| ಸರ್ವದರ್ಶನ | ರಾ 7–00 | ರಾ 8–45 | ರಾ 7–00 | ರಾ 8–45 |
| ಏಕಾಂತ ಸೇವೆ | ರಾ 8–45 | ರಾ 9–00 | ರಾ 8–45 | ರಾ 9–00 |

| | |
|---|---|
| *ಆರ್ಜಿತ ಕಲ್ಯಾಣೋತ್ಸವ ಶುಲ್ಕ | ರೂ – 150=00 |
| *ಅಭಿಷೇಕ (ಶುಕ್ರವಾರಗಳಲ್ಲಿ) ಶುಲ್ಕ | ರೂ – 100=00 |
| ಅರ್ಚನೆ | ರೂ – 3=00 |
| ಆರತಿ | ರೂ – 1=00 |
| ತೆಂಗಿನಕಾಯಿ ವರ್ತನೆ | ರೂ – 0=50 |
| ಅಭಿಷೇಕಾನಂತರ ದರ್ಶನ | ರೂ – 3=00 |

ಶತ್ರುಘ್ನರೆಂಬವಳಿಗಳು ಸುಮಿತ್ರೆಯುದರಲಿ ಜನಿಸಿದರು.

ಬಾಲಚಂದ್ರನು ಪ್ರತಿ ದಿನ ವೃದ್ಧಿಯಾಗುವಂತೆ ತಾಯಕ್ಕರೆಯ ತೊಡೆಯ ತೊಟ್ಟಿಲಲಿ ಬೆಳೆಯುತ್ತಿದ್ದನು ಆ ರಾಮಚಂದ್ರ. ಅನೇಕ ವರ್ಷಗಳಿಂದ ಸಂತಾನ ಭಾಗ್ಯ ಮತ್ತು ಅದರ ದಿವ್ಯಾನುಭೂತಿಗಾಗಿ ಹಲುಬಿ ಹಂಬಲಿಸಿ ಅತ್ತು ತಪವನ್ನಾಚರಿಸಿದ ಆ ತಾಯಿ ತಂದೆಯರ ಹೃದಯಗಳಲ್ಲಿ ಆನಂದದ ಹೊಳೆ ಉಕ್ಕಿ ಹರಿಯತೊಡಗಿತು. ಕೌಸಲ್ಯೆಗಾದರೋ ಶ್ರೀ ರಾಮಚಂದ್ರನನ್ನು ಬಿಟ್ಟು ಬೇರೆ ಜಗತ್ತೇ ಇಲ್ಲದಂತಾಯಿತು. ಆ ಎಳೆ ಕಂದನ ಚಿಗುರಿನಂತ ತೋಳುಗಳನ್ನು ಹಿಡಿದೆತ್ತಿ ಅಪ್ಪಿ ಮೈ ಮರೆಯುವಳು, ಕೆನ್ನೆಗೆ ಕೆನ್ನೆಯೊತ್ತಿ ಹಣೆಗೆ ಹಣೆಯೊತ್ತಿ ತನ್ನೆದೆಯಲ್ಲಿ ಮಗುವನ್ನು ಅವುಚಿಕೊಂಡು ಆನಂದದಲ್ಲಿ ತಲ್ಲೀನಳಾಗುವಳು. ಉಂಗುರುಂಗುರಾದ ಎಳೆಗೂದಲನ್ನು ನೇವರಿಸಿ, ಪುಲಕಗೊಳ್ಳುವಳು. ಮಗುವಿನ ಮೈಯೆಲ್ಲಾ ಮುದ್ದಿನ ಮುದ್ದೆಯಾಗಿತ್ತು. ಆ ತಾಯ ಮನಕೆ ಕಂದನ ಕಂಗಳನ್ನು ನೋಡಿದಾಗ ಆಕಾಶವನ್ನು ನೋಡಿದಂತೆ, ತೊದಲನುಡಿ ಸಮುದ್ರ ಘೋಷದಂತೆ ಕೇಳಿಸುತ್ತದೆ. ಹೂವಿನಂತೆ ಹಗುರಾದ ಶಿಶು ಒಮ್ಮೊಮ್ಮೆ ಗಿರಿ ಭಾರವಾಗಿ ಎತ್ತಿಕೊಳ್ಳಲು ಕಷ್ಟವಾಗುತ್ತದೆ. ಪಚ್ಚೆ ತೊಟ್ಟಿಲಲ್ಲಿ ಮಲಗಿದ ಶಿಶುವಿನ ಸ್ಥಾನದಲ್ಲಿ ಒಮ್ಮೊಮ್ಮೆ ಮಹಾ ಮೂರ್ತಿ ಕಾಣುತ್ತದೆ. ಹೀಗಾಗುತ್ತಿರಲು ದುಷ್ಟಗ್ರಹ ಚೇಷ್ಟೆಯೆಂದು ಭಯಗೊಂಡ ಮಾತೆ ಕೌಸಲ್ಯೆ ಬ್ರಹ್ಮರ್ಷಿ ವಶಿಷ್ಟರ ಸನ್ನಿಧಿಗೆ ಹೋಗಿ ಅಳು ಕಣ್ಣರುಹಲು, ವಶಿಷ್ಠರು ಕೌಸಲ್ಯೆಯನ್ನು ಸಂತೈಸುತ್ತಾ–

'ಬಿಡು ಮಗಳೆ ಭೀತಿಯ, ನಿನ್ನೆ ನಾನು ಧ್ಯಾನದೊಳಿದ್ದಾಗ ದಿವ್ಯಲೋಕಗಳಲ್ಲಿ ದಿವ್ಯ ಚರಣಗಳೆರಡು ಸಂಚರಿಸುತ್ತಿರಲು, ಆ ಪಾದ ಚಿಹ್ನೆಗಳು ಅನೇಕ ನಕ್ಷತ್ರಗಳಂತೆ ಹೊಳೆಯತೊಡಗಿ ಹಿಂಬಾಲಿಸುತ್ತಾ, ಅಯೋಧ್ಯೆಯನ್ನು ಹೊಕ್ಕವು. ಮೊದಲು ಕಂಡ ಆ ಜ್ಯೋತಿಃ ಶರೀರಿಯು ನಿನ್ನ ಮಡಿಲಲ್ಲಿ ಈ ಶಿಶುರೂಪದಲ್ಲಿ ಮಲಗಿರುವುದನ್ನು ಕಂಡೆ. ನೀನು, ನಾನು, ಅಯೋಧ್ಯೆ, ರವಿ ಕುಲವೇ ಧನ್ಯಗೊಂಡೆವು. ಆದ್ದರಿಂದ ನಿನ್ನ ಹೆದರಿಕೆಗೆ ಆಧಾರವೇ ಇಲ್ಲ'ವೆಂದು ಸಂತೈಸಿ ಕಳುಹಿಸಿದರು.

ನಸುನೊಕೆತ ಹಾಲು ಹಲ್ಲುಗಳ, ಜೊಲ್ಲು ಸುರಿಸುತ್ತಾ ಕಿವಿಗಿಂಪಾಗಿ ತೊದಲುತ್ತಾ, ದಾದಿಯರು ಕರೆದರೆ ಹೊಂಗೆಜ್ಜೆ ಕಿಣಿ, ಕಿಣಿನಾದದೊಂದಿಗೆ ಅಂಬೆಗಾಲಿಕ್ಕುತ್ತ, ಕೈ ನೀಡಿದರೆ ನೀಡಿದ ಕೈಯ್ಯನ್ನಿಡಿದು ಎದ್ದು ನಿಂತು ನಡೆಯಲು

ಾನು ಪಡುವ ಸಾಹಸಕ್ಕೆ ತಾನೇ ಸಂತೋಷದಿಂದ ನಗುತ್ತ, ಕೈಬಿಡಲು ಮತ್ತೆ ನೆಲವನ್ನು ಕೈಯಿಂದ ಹಿಡಿದು ನಗುತ್ತ ಬಾಲ ಲೀಲೆಗಳಿಂದ ಬೆಳೆದನು ರಾಮಚಂದ್ರ, ತನ್ನ ಅನುಜರೊಂದಿಗೆ ಒಂದೇ ಗೊಂಚಲಿನ ನಾಲ್ಕು ಹೂಗಳು ಬೆಳೆಯುವಂತೆ.

ಹೀಗೆ ಬೆಳೆಯುತ್ತಿರಲು ಒಂದು ಹುಣ್ಣಿಮೆಯ ರಾತ್ರಿಯಲ್ಲಿ ಉದ್ಯಾನದಲ್ಲಿ ರಾಣಿಯರೆಲ್ಲ ತಮ್ಮ ಮಕ್ಕಳೊಂದಿಗೆ ವಿಹರಿಸುತ್ತಿರಲು, ಶಿಶುರಾಮ ಆಕಾಶದಲ್ಲಿ ಹೊಳೆಯುವ ಪೂರ್ಣಚಂದ್ರನು ಬೇಕೆಂದು ಆಸೆಪಟ್ಟು ತಾಯಿ ಕೌಸಲ್ಯೆಯನ್ನು ಕಾಡಿಸಿ ಹಲುಬಿ, ಹಂಬಲಿಸಿ, ನನ್ನ ಬಳಿಗೆ ಬರಬಾರನೆಂದು ಎಷ್ಟು ವಿಧವಾಗಿ ಸಂತೈಸಿದರೂ ಕೇಳದೆ, ಅಳುವನ್ನು ನಿಲ್ಲಿಸದೆ, ಚಿಕ್ಕ ಕೈಗಳನ್ನು ಆಕಾಶದೆಡೆಗೆ ಚಾಚಿ ಅತ್ತು, ಬಂಗಾರದ ಒಡವೆ, ಬಣ್ಣ ಬಣ್ಣದ ಹಣ್ಣುಗಳನ್ನು ಪಕ್ಕಕ್ಕೆ ನೂಕಿ ತಾಯಿ ಬೆದರಿಕೆಗೂ ಬಗ್ಗದೆ, ಕೇಳುವವರ ಎದೆ ಕರಗುವಂತೆ ಬೋರಿಟ್ಟನು. ಆ ರಾಮಚಂದ್ರ. ಆ ರೋಧನಕ್ಕೆ ಬೆಚ್ಚಿ ಕೋಪಗೊಂಡು ದಶರಥನು ಬರಲು ಮುಂದೇನು ಗತಿಯೆಂದು ದೂರ ಸರಿದರು ದಾದಿಯರು. ಮಗನ ರೋಧನದಿಂದಾಗಿ ದಿಕ್ಕು ಕಾಣದ ಕೌಸಲ್ಯೆ, "ದಮ್ಮಯ್ಯ ಕಂದಯ್ಯ, ನಿನಗೆ ಕೈ ಮುಗಿಯುತ್ತೇನೆ ಅಳಬೇಡ"ವೆಂದು ಬೇಡುತ್ತಾ ಸಂತೈಸಲಾಗದೆ ತಾನೂ ಕಣ್ಣೀರಿಡುತ್ತ ಅಪ್ಪಿ ಮುದ್ದಾಡಿ ಸಂತೈಸ ಪ್ರಾರಂಭಿಸುತ್ತ ರವಿ ವಂಶದವನೆಂದು ಕರುಬಿ ಕಾಡಿಸುತ್ತಿರುವನೆಂದು ಆ ಚಂದ್ರನನ್ನು ಬೈದಳು.

ಅಷ್ಟು ಹೊತ್ತಿಗಾಗಲೇ ಬಂದ ದಶರಥನಿಗೆ ಕಂಬನಿ ಮಿಡಿಯುತ್ತ ಕೈಕೇಯಿ ರಾಮನ ರೋಧನಕ್ಕೆ ಕಾರಣವನ್ನು ಹೇಳಿದಳು.

ಇಲ್ಲಿ ಅರಿವಿಲ್ಲದೆ ಕೋರುವ ಮಕ್ಕಳ ಅಸಮಾನ್ಯ ಕೋರಿಕೆಗಳಿಂದಾಗಿ ತಾಯಿತಂದೆಯರ ಹೃದಯ ಎಷ್ಟು ತಲ್ಲಣಗೊಂಡು ಹಂಬಲಿಸುತ್ತದೆ ಎಂಬುದರ ಚಿತ್ರಣ ವಾಚಕನ ಮನದಲ್ಲಿ ಶಾಶ್ವತವಾಗಿ ನೆಲೆಗೊಳ್ಳುತ್ತದೆ.

ಮಗನ ಆಸೆಯನ್ನು ಕೇಳಿದ ದಶರಥ, ತನ್ನ ಶಕ್ತಿಗೆ ಮೀರಿದ ಆ ಆಸೆಯನ್ನು ಕೈಗೂಡಿಸಲು ಸಾಧ್ಯವಿಲ್ಲವೆಂದು ನೆನೆದು "ಶಿವ ಶಿವ ತಿರೆಗರಸನಾದರೇನೊಂದು ಕೂಸಿನ ಬಯಕೆ ಬಡತನವನೊಡರಿಸಿತಲ–ತನ್ನ ಸಿರಿ ಇನಿತು ಪುಸಿಯಾಯ್ತು" ಎಂದು ಕೌಸಲ್ಯೆಯಿಂದ ರಾಮನನ್ನು ಕರೆದು ಎತ್ತಿಕೊಂಡು ಜಿಂಕೆಗಳ ಬಳಿಗೆ, ತಾವರೆಗಳಿಂದ ಕೂಡಿದ ಕೊಳಗಳಲ್ಲಿ ಈಜುತ್ತಿರುವ ಹಂಸಗಳ ಬಳಿಗೆ, ಮತ್ತೆ ಬೆಳದಿಂಗಳಲ್ಲಿ ಗರಿಗೆದರಿ ಕುಣಿಯುವ ನವಿಲುಗಳೆಡೆಗೆ, ರತ್ನಕೃತ ಕೃತಕ ಪಕ್ಷಿಗಳ ಸಮೂಹವನ್ನು ತೋರಿಸುತ್ತಾ, ಲತಾಕುಂಜಗಳನ್ನು ಹೊಕ್ಕು ಏನೇನನ್ನೋ ತೋರಿಸಿದರೂ ಅಳು ನಿಲ್ಲುವುದರ ಬದಲು ಹೆಚ್ಚುತ್ತಲೇ ಹೋಯ್ತು.

ದಿಕ್ಕುಗಾಣದ ದೊರೆ ಮಂತ್ರಿ ಸುಮಂತ್ರನನ್ನು ಕರೆಸಲು ಆತನೂ ಬಾಲಕನ ಆಸೆಗೆ ಆಶ್ಚರ್ಯಪಟ್ಟು ಮೌನವಾಗಿ ನಿಂತನು. ಹೀಗೆ ಯಾರ ಕೈಯ್ಯಲ್ಲೂ ರಾಮಚಂದ್ರನ ಅಳು ನಿಲ್ಲಿಸಲಾಗದೆ, ದಿಕ್ಕೇ ತೋಚದೆ ತಲ್ಲಣಿಸುತ್ತಿರಲು, ಅಲ್ಲಿಗೆ ಒಬ್ಬ ಮುದುಕಿ ಭರತನನ್ನು ಕಂಕುಳಲ್ಲೆತ್ತಿಕೊಂಡು ಬಂದಳು. ಆ ಮುದುಕಿಯನ್ನು ಕಂಡ ತಕ್ಷಣ ಕೈಕೇಯಿಯನ್ನು ಬಿಟ್ಟು ಅಲ್ಲಿದ್ದವರೆಲ್ಲಾ ಅಮಂಗಳವನ್ನು ಕಂಡವರಂತೆ ಮುಖ ತಿರುಗಿಸಿ ಮಾತು ನಿಲ್ಲಿಸಿದರು.

ಬಿಲ್ಲಿನಂತೆ ಬಾಗಿದ ಬೆನ್ನು, ತೊನ್ನಿನಂತೆ ಬಿಳಿ ಮಚ್ಚೆಗಳಿಂದ ಕೂಡಿರುವ ಕಪ್ಪನೆಯ ಶರೀರ, ಸುಕ್ಕು ಸುಕ್ಕಾಗಿ ಬತ್ತಿದಂತಿರುವ ಚರ್ಮ, ಅಸ್ಥಿಪಂಜರದಂತೆ ಕಾಣುವ ದೇಹ, ಹಲ್ಲುದುರಿದ ಬೊಚ್ಚು ಬಾಯಿ. ಹೀಗೆ ವಿಕಾರವಾಗಿ ಕಾಣುವ ಆ ಮುದುಕಿಯನ್ನು ಕಂಡ ಕೂಡಲೆ ಹತ್ತಿರಕ್ಕೆ ಹೋಗಿ ಬಗ್ಗಿ ಮಾತನಾಡಿಸಿದ ಕೈಕೇಯಿ ಕಿವಿಯಲ್ಲಿ ಮುದುಕಿ ಏನನ್ನೋ ಹೇಳಿ, ಮಡಿಲಿನಿಂದೊಂದು ಮುಕುರವನ್ನು ತೆಗೆದುಕೊಟ್ಟಳು. ಸಂತೋಷಗೊಂಡ ಕೈಕೇಯಿ ಅದನ್ನು ತೆಗೆದುಕೊಂಡು ಹೋಗಿ ದಶರಥನ ತೋಳುಗಳಲ್ಲಿ ಅಳುತ್ತಿದ್ದ ರಾಮನಿಗೆ ಕೊಟ್ಟು ಅದರಲ್ಲಿ ಚಂದ್ರನ ಪ್ರತಿಬಿಂಬವನ್ನು ತೋರಿಸಿದಳು. ಅದನ್ನು ಕಂಡ ರಾಮ ಬಾನೆಡೆಯ ಚಂದಿರನ ಪಡೆದೆನೆಂದು ನಲಿದು ಕುಣಿದಾಡಿದನು. ಇದರಿಂದ ಸಂತಸಗೊಂಡ ಮುದಿ ಗೂನಿ ಮಂಥರೆ ರಾಮನನ್ನು ಮುದ್ದಿಸಲು ತೋಳು ಚಾಚಲು, ಕೌಸಲ್ಯೆ ಮಂಥರೆಯನ್ನು "ಮುಟ್ಟಬೇಡ, ಮುಟ್ಟಬೇಡ"ವೆಂದು ನಿವಾರಿಸಲು "ಮುದಿ ಮಂಥರೆಯ ಮೈತ್ರಿ ಜಜ್ಝರಿತವಾಗಿ" ಮುರಿದ ಒಲುಮೆಯ ಅಪಮಾನದಿಂದ ಕಣ್ಣೀರಿಡುತ್ತಾ ಭರತನನ್ನು ಬಿಗಿದಪ್ಪಿಗೊಂಡು ತುಳಿದ ಸರ್ಪಿಣಿಯಂತೆ ಅಲ್ಲಿಂದ ಹೊರಟು ಹೋದಳು.

ಈ ಅಧ್ಯಾಯದ ಕೊನೆಯಲ್ಲಿ ಕವಿ ಹೇಳಿರುವ ಸಾಲುಗಳು ಅತ್ಯಂತ ಸಮರ್ಪಕವಾಗಿವೆ.

" ಹಾ, ಮಂಥರೆಯ ಈ ಮಮತೆಯಾವರ್ತ
ದೊಳ್
ಸುಟ್ಟುರೆಗೆ ಧೂಳಿ ತರಗೆಲೆ ತಿರ್ರನೆಯೆ ಸುತ್ತು
ವೋಲ್
ಸಿಲ್ಕಿ ಘೂರ್ಣಿಸದಿಹುದೆ ಪೇಳ್ ತ್ರೇತಾ
ಮಹಾಯುಗಂ "

ಈ ಸಾಲುಗಳು ಅರ್ಥ ಪೂರ್ಣವಾಗಿದೆಯಲ್ಲದೆ ಈ ಘಟನೆ ರಾಮಾಯಣವು ಅತಿ ಮುಖ್ಯವಾದ ಒಂದು ತಿರುವನ್ನೇ ನೀಡುತ್ತದೆ. " ರಾಮನಾ–ಬಾಲ್ಯದ ಘಟನೆ ಆಯಿತು ರಾಮಾಯಣಕೆ ನಾಂದಿ ".

---

## ಪುಸ್ತಕ ಪರಿಚಯ

ಕಣ್ವಶಾಖಾರೀತಿಯಲ್ಲಿ ತಯಾರಿಸಿದ ಶ್ರೀರಾಮ ಪಟ್ಟಾಭಿಷೇಕ: ಲೇ॥ ವೇ॥ ಬ್ರಂ॥ ಶ್ರೀ ಗುಂಜೂರು ರಾಮಚಂದ್ರಶಾಸ್ತ್ರಿ; ಪ್ರಕಾಶಕರು. ಗುಂಜೂರು ರಾಮಚಂದ್ರಶಾಸ್ತ್ರಿ, ನಂ. 64, 4ನೇ ಬ್ಲಾಕ್, ತ್ಯಾಗರಾಜನಗರ, ಬೆಂಗಳೂರು 22

ವಿಶ್ವ ಸಾಹಿತ್ಯದಲ್ಲಿ ರಾಮಾಯಣವು ತನ್ನದೇ ಆದ ವಿಶಿಷ್ಟಸ್ಥಾನವನ್ನು ಗಳಿಸಿಕೊಂಡಿದೆ. ಶ್ರೀರಾಮಚಂದ್ರ ದೇವಾಧಿದೇವನಾದ ಮಹಾವಿಷ್ಣುವಿನ ಒಂದು ಅಪೂರ್ವ ಅವತಾರ. ಅವನು ಕೋಟಿ ಸೂರ್ಯ ಪ್ರಕಾಶಮಾನನಾದವನು. ಅವನಿರುವ ಎಡೆಯಲ್ಲಿ ದಾರಿದ್ರ್ಯಕ್ಕೆ ಎಡೆಯಿಲ್ಲ, ದುಃಖಕ್ಕೆ ತಾಣವಿಲ್ಲ, ವೈರದ್ವೇಷಾದಿಗಳಿಗೆ ಎಡೆಯೇ ಇಲ್ಲ.

ನಮ್ಮಲ್ಲಿ ಪ್ರತಿವರ್ಷ ರಾಮನವಮಿಯ ಉತ್ಸವ ವಿಜೃಂಭಣೆಯಿಂದ ನಡೆಯುತ್ತದೆ. ಆ ಸಂದರ್ಭಗಳಲ್ಲಿ ಶ್ರೀ ರಾಮಾಯಣ ಮಹಾ ಕಾವ್ಯದ ಪಾರಾಯಣ ನಡೆದು ರಾಮದೇವರಿಗೆ ಪಟ್ಟಾಭಿಷೇಕ ನಡೆಸುವ ಪರಿಪಾಠ ಉಂಟು. ಸಾಧಾರಣವಾದ ದಿನಗಳಲ್ಲಿ ಕೂಡ ಪಾರಾಯಣ ಆದ ನಂತರ ಭಾನು, ಬುಧ, ಶನಿವಾರಗಳಂದು ಪಟ್ಟಾಭಿಷೇಕವನ್ನು ಮಾಡುವುದುಂಟು.

ಈ ಪುಸ್ತಕದಲ್ಲಿ ಪ್ರಯೋಗಪೂರ್ಣವಾದ ಶ್ರೀರಾಮ ಪಟ್ಟಾಭಿಷೇಕ ಮಂತ್ರ ಸಹಿತವಾಗಿ ಅಡಗಿದೆ. ಪೂಜೆಯ ವಿವಿಧ ಪ್ರಕಾರಗಳನ್ನು ವರ್ಣಿಸಲಾಗಿದೆ. ಗ್ರಂಥಕರ್ತರು ಹೇಳಿರುವಂತೆ ಪ್ರತಿ ಆವರಣ ಮತ್ತು ಮಂತ್ರ ಮುಗಿದ ಮೇಲೆ ಎಳ್ಳು ಅಕ್ಕಿ ಮಿಶ್ರಿತವಾದ ಅರ್ಘ್ಯವನ್ನು ನಿರ್ವಂಚನೆಯಿಂದ ಕೊಟ್ಟರೆ ಎಂಥಹ ಗ್ರಹಶಾಂತಿಯನ್ನಾದರೂ ಕಡಿಮೆ ಮಾಡಿಕೊಳ್ಳಬಹುದು. ಹೋಮವನ್ನು 10,000 ಮಾಡುವುದರಿಂದ ಮಾಟ, ಅಭಿಚಾರ, ಶೂನ್ಯಗಳನ್ನು ತಡೆಯಬಹುದು. ಅಭಿಚಾರದೋಷ ಪೂರ್ಣ ತೆಗೆಯಬೇಕಾದರೆ ಶಾಂತಿ ಪೂಜಾಪದ್ಧತಿಯಲ್ಲಿರುವ ಗಾಯತ್ರೀ ಪೂಜೆ ಅವಶ್ಯಮಾಡಬೇಕು.

ಇದರಿಂದ ಲಾಭವೇನು ? "ಆಯುರಾರೋಗ್ಯ ಮೈಶ್ವರ್ಯಂ ಮರಿವಕ್ಷಯಸ್ಸುಖಂ, ಸಂತೋಷ ಕ್ರಾಂತಿರಾಸ್ತಿಕ್ಯಂ ವಿದ್ಯಾಂಭವತು".

**ಸೀತಾಪ್ರಿಯ**

# ಶ್ರೀ ರಾಮ ಸ್ತೋತ್ರ



ಶ್ರೀರಾಘವಂ ದಶರಥಾತ್ಮಜಮಪ್ರಮೇಯಂ
ಸೀತಾಪತಿಂ ರಘುಕುಲಾನ್ವಯ ರತ್ನದೀಪಮ್ !
ಅಜಾನುಬಾಹುಮರವಿಂದದಲಾಯತಾಕ್ಷಂ
ರಾಮಂ ನಿಶಾಚರವಿನಾಶಕರಂ ನಮಾಮಿ ॥

ವಿಶುದ್ಧಂ ಪರಂ ಸಚ್ಚಿದಾನಂದರೂಪಂ
ಗುಣಾಧಾರಮಾಧಾರಹೀನಂ ವರೇಣ್ಯಮ್ ।
ಮಹಾಂತಂ ವಿಭಾಂತಂ ಗುಹಾಂತಂ ಗುಣಾಂತಂ
ಸುಖಾಂತಂ ಸ್ವಯಂ ಧಾಮಂ ರಾಮಂ ಪ್ರಪದ್ಯೇ ॥

ವೈದೇಹೀಸಹಿತಂ ಸುರದ್ರುಮತಲೇ
ಹೈಮೇ ಮಹಾಮಂಡಪೇ ।
ಮಧ್ಯೇಪುಷ್ಪಕಮಾಸನೇ ಮಣಿಮಯೇ
ವೀರಾಸನೇ ಸುಸ್ಥಿತಮ್ ॥
ಅಗ್ರೇವಾಚಯತಿ ಪ್ರಭಂಜನಸುತೇ
ತತ್ತ್ವಂ ಮುನಿಭ್ಯಃ ಪರಮ್ ।
ವ್ಯಾಖ್ಯಾಂತಂ ಭರತಾದಿಭಿಃ ಪರಿವೃತಂ
ರಾಮ ಭಜೇ ಶ್ಯಾಮಲಮ್ ॥



# ಗೃಹಲಕ್ಷ್ಮಿ



## ವಾಲ್ಮೀಕಿಗಳು ಚಿತ್ರಿಸಿದ

# ಸೀತೆ



ಕವಿ ಸೀತೆಯನ್ನು ಚಿತ್ರಿಸಿರುವ ರೀತಿಯನ್ನು ನಾವು ನೋಡಬಹುದು ರಾಮಾಯಣದ ಉಪೋದ್ಘಾತಕಾರನು ಈ ಕಾವ್ಯವನ್ನು "ಸೀತಾಯಾಶ್ಚರಿತಂ ಮಹತ್" ಎಂದು ಹೇಳುತ್ತಾನೆ. ಉಪೋದ್ಘಾತ ಕರ್ತೃವಿನ ಬುದ್ಧಿ ಬಹು ಸೂಕ್ಷ್ಮವಾದದ್ದು. ರಾಮಾಯಣವನ್ನು 'ರಾಮಾಯಣ' ಎನ್ನದೆ ಬೇರೆ ಒಂದು ಹೆಸರಿಂದ ಕರೆಯಬೇಕಾದರೆ 'ಸೀತಾ ಚರಿತ' ಎಂದೇ ಹೇಳಬೇಕು ರಾಮನು ಎಂಥ ಧೀರನು, ಎಂಥ ಮಹಾತ್ಮನು, ಎಂಥ ಸತ್ಯಪರಾಕ್ರಮನು ಎಂದು ತೋರಿಸಲು ಕವಿ ಎಷ್ಟುಮಟ್ಟಿಗೆ ಉದ್ದೇಶಿಸಿದನೋ ಅಷ್ಟೇ, ಅಥವಾ ಅದಕ್ಕೂ ಹೆಚ್ಚಾಗಿ ಅವನು, ರಾಮನ ಸತಿ ಸೀತೆ ಧೀರಳು, ಮಹಾತ್ಮಳು, ಸತ್ಯಸಂಗರಳು ಎಂದು ತೋರಿಸಲು ಉದ್ದೇಶಿಸಿದನು. ಸೀತಾರಾಮರ ಸಂಸಾರವನ್ನು ಕವಿ ಅಷ್ಟಾಗಿ ವರ್ಣಿಸಲಿಲ್ಲ. ಆದರೆ ಅವರುಎಳೆಯ ತನದ ಸಂಸಾರದ ಸುಖವನ್ನು ಅನುಭವಿಸಿದರೆಂದು ಸಾಕಾದಷ್ಟು ಸೂಚನೆ ಮಾಡಿದಾನೆ. "ಈ ನನ್ನ ಮಗಳು ಸೀತೆ ನಿನ್ನ ಸಹಧರ್ಮಚಾರಿಣಿ" ಎಂದು ಜನಕನು ಅವಳ ಕೈಯನ್ನು ರಾಮನ ಕೈಯಲ್ಲಿ ಇಟ್ಟ ವೇಳೆ ರಾಮನೂ ಸೀತೆಯೂ ಇನ್ನೂ ಸಣ್ಣವರು. ಆದರೆ ಅವಳಿಗೆ ಸಹಧರ್ಮಚಾರಿಣಿಯ ಹೊಣೆ ಯಾವುದೆಂಬ ವಿಷಯದಲ್ಲಿ ಅವಶ್ಯಕವಾದ ತಿಳಿವಳಿಕೆ ಆಗಲೇ ಹುಟ್ಟಿತ್ತು. ತಂದೆಯ ಕುಲದ ಹಿರಿಮೆಯ ಭಾವನೆಯಿಂದ, ಅವನ ಧರ್ಮದ ಅನವರತ ವೀಕ್ಷಣದಿಂದ, ಅವನ ಸತಿಯ ಸದ್ವರ್ತನದ ಆದರ್ಶದಿಂದ, ಸೀತೆ ಆ ಮೊದಲೇ ಅವಳು ಪತಿಯೊಡನೆ ಅರಮನೆಯಲ್ಲಿ ಸುಖದಿಂದಿರುವುದಕ್ಕೆ ಹೇಗೋ ಹಾಗೆ ಅವನೊಡನೆ ಕಾಡಿನಲ್ಲಿ ಕಷ್ಟಪಡುವುದಕ್ಕೂ ಸಿದ್ಧಳಾಗಿದ್ದಳು. "ನಾನು ಕಾಡಿಗೆ ಹೋಗಿಬರುತ್ತೇನೆ. ನೀನು ಇಲ್ಲಿಯೇ ಇರು," ಎಂದು ಹೇಳುವುದು ಪತಿಯ ದೃಷ್ಟಿಯಿಂದ ಹೇಗೆ ಸರಿಯಾದ ಮಾತೋ ಹಾಗೆ, "ನೀನು ಎಲ್ಲಿ ಹೋದರೆ ಅಲ್ಲಿ ನಾನು ಬರುತ್ತೇನೆ," ಎಂದು ಹೇಳುವುದು ತನ್ನ ದೃಷ್ಟಿಯಿಂದ ಸರಿಯೆಂದು ಸೀತೆಗೆ ನಿಶ್ಚಯವಾಗಿತ್ತು. ಅದನ್ನು ಅವಳು ಒಡನೆಯೇ ಹೇಳಿದಳು; ಸಹಜವಾಗಿ ಹೇಳಿದಳು; ತನಗೆ ಹೇಳುವುದಕ್ಕೆ ಸರಿಯಾದ ಮಾತು ಬೇರೆ ಇಲ್ಲವೆಂಬಂತೆ ಹೇಳಿದಳು. ರಾಮನು ಈ ಮಾತಿನ ವೇಗಕ್ಕೆ ಸೋತನು; ಅದರಿಂದ ಇವಳ ಪ್ರೇಮವೆಂಥದೆಂದು ತಿಳಿದನು. "ನಿನ್ನ ಇಷ್ಟದಂತೆ ಮಾಡು, ನನಗೂ ಅದು ಇಷ್ಟವೆ. ಈ ನಡತೆ ನಿನಗೆ ಅನುಗುಣವಾದದ್ದು ಇದರಿಂದ ನೀನು ನಿಜವಾಗಿ ನಿಮ್ಮ ತಂದೆ ಹೇಳಿದಂತೆ ನನ್ನ ಸಹಧರ್ಮಚಾರಿಣಿ ಆಗುವೆ," ಎಂದನು. ತನ್ನ ಮನಸ್ಸಿನ ನಿಶ್ಚಯವನ್ನು ರಾಮನಿಗೆ ತಿಳಿಸುವುದರಲ್ಲಿ ಸೀತೆ ಅವನನ್ನು ಹಳಿಯುವುದಕ್ಕೆ ಹಿಂಜರಿಯಲಿಲ್ಲ. ಕಾಡಿಗೆ ಹೋಗುವುದು ತನಗೆ ಇಷ್ಟ, ಕಾಡಿನಲ್ಲಿರುವುದು ಬಹಳ ಚೆನ್ನಾಗಿರುತ್ತದೆ, ಕಾಡಿಗೆ ಹೋಗಬೇಕೆಂದು ತನ್ನ ಜಾತಕದಲ್ಲಿದೆ, ಎಂದು ತನ್ನ ದೃಷ್ಟಿಯಿಂದಲೂ, ಪ್ರೀತಿಯಿಂದ ನಡೆದುಕೊಂಡಿರುವ ತನ್ನನ್ನು ತೊರೆದು ಹೋಗಲು ರಾಮನಿಗೆ ಕಾರಣ ಯಾವುದೂ ಇರಲಾರದು, ಹಾಗೆ ಹೋಗುವುದು ವೀರನಾದ ರಾಜಕುಮಾರನಿಗೆ ತಕ್ಕದಲ್ಲ, ತಾನು ಅರಣ್ಯದಲ್ಲಿ ರಾಮನಿಗೆ ಬಹಳ ಭಾರವಾಗುವುದಿಲ್ಲ, ಅವನು ಏನನ್ನು ತಂದರೂ ಅದನ್ನು ತಿಂದು ತೃಪ್ತಳಾಗಿ ಇರುತ್ತೇನೆ, ಎಂದು ಅವನ ದೃಷ್ಟಿಯಿಂದಲೂ ಮತ್ತೆ ಮತ್ತೆ ಹೇಳಿದಳು. ತನ್ನನ್ನು ಬಿಟ್ಟೇ ಹೋಗುವುದಾದರೆ ಅದು ರಾಮನ ಪೌರುಷಕ್ಕೇ ಕಳಂಕವೆಂದು ಬಾಯಿಬಿಟ್ಟು ಹೇಳಿದಳು. ರಾಮನು ತನ್ನನ್ನು ಬೆಂಕಿಗೆ ಹೊಗುವುದಕ್ಕೆ ಬಿಟ್ಟಾಗ ಅವಳು ಇಂಥ ಮಾತನ್ನಾಡಲಿಲ್ಲ; ಅಯೋಧ್ಯೆಯಲ್ಲಿರು ಎಂದಾಗ ಹೆಂಗಸಿನ ವಿನಯಕ್ಕೆ ವಿರುದ್ಧವೆಂದು ಕಾಣುವ ಈ ಮಾತನ್ನು ಆಡಿಬಿಟ್ಟಳು ಸೀತೆ ಆವಶ್ಯಕವೆಂದು ಕಂಡಾಗ ಯಾವ ಮಾತನ್ನಾಡುವುದಕ್ಕೂ ಹಿಂಜರಿಯುವಳಲ್ಲವೆನ್ನುವುದು ರಾಮನ ಸಹಾಯಕ್ಕಾಗಿ ಲಕ್ಷ್ಮಣನನ್ನು ಕಳುಹಿಸುವ ಸಂದರ್ಭದಲ್ಲಿ ಅವಳು ಹೇಳಿದ ಮಾತಿನಿಂದಲೂ ಕಾಣುತ್ತದೆ. ಸ್ಥೂಲವಾಗಿ ನೋಡಿದರೆ, ಇದೇಕೆ ಈ ಹೆಂಗಸು ಗಂಡನ ತಮ್ಮನಿಗೆ ಇಂಥ ಮಾತನ್ನು ಆಡಿದಳು, ಎನ್ನಿಸುತ್ತದೆ. ಆ ಸಮಯ, ಆ ಸ್ಥಳ, ಆ ಸಂದರ್ಭಗಳನ್ನು ಊಹಿಸಿಕೊಂಡರೆ ಸೀತೆ ಆ ಮಾತನ್ನಲ್ಲದೆ ಇನ್ನು ಏನನ್ನು ಆಡುವುದೂ ಸಾಧ್ಯವಿರಲಿಲ್ಲವೆನ್ನುವುದು ಸ್ಪಷ್ಟವಾಗುವುದು. ರಾಮನು ರಾಕ್ಷಸರ ಮಾಯೆಯಿರಬಹುದೆಂದು ಸಂದೇಹವನ್ನುಂಟುಮಾಡಿದ್ದ ಮೃಗವನ್ನು ಬೆನ್ನಟ್ಟಿ ಹೋಗಿದ್ದನು. ಲಕ್ಷ್ಮಣನಿಗಂತೂ ಆ ಮೃಗ ರಾಕ್ಷಸರ ಮಾಯೆಯೆಂದು ಪ್ರಬಲವಾದ ಸಂದೇಹ. ಇದು ಏನಾಗುವುದೋ ಎಂದು ಅವನು ತೀವ್ರವಾದ ಶಂಕೆಯಿಂದ ನಿಂತಿದಾನೆ. ಪತಿ ಅಟ್ಟಿರುವುದು ಮೃಗವೋ ರಾಕ್ಷಸನೋ ಎಂದು ಸೀತೆಗೂ ಶಂಕೆಯುಂಟು. ಇವರು ಇದ್ದದ್ದು ರಾಕ್ಷಸರ ಓಡಾಟದ ವನಪ್ರದೇಶದಲ್ಲಿ. ಮಾರೀಚ ಮೊದಲಾದ ರಾಕ್ಷಸರ ಅಸಾಧಾರಣ ಪರಾಕ್ರಮವನ್ನೂ ಅಭೇದ್ಯ ಛದ್ಮಗಳನ್ನೂ, ಅಚಿಂತ್ಯ ವರ್ತನಗಳನ್ನೂ ಕುರಿತು ಆಶ್ರಮದಲ್ಲಿ ಆಗಾಗ ಸೀತಾರಾಮಲಕ್ಷ್ಮಣರು ಮಾತನಾಡಿರಬೇಕು ಮಾಯಾಮೃಗವನ್ನು ಕಂಡಾಗ ಲಕ್ಷ್ಮಣನು ಆಡಿದಮಾತು ಇದನ್ನು ಸೂಚಿಸುತ್ತದೆ. ಇಂಥ ವೇಳೆಯಲ್ಲಿ ಕಾಡಿನಲ್ಲಿ ರಾಮನ ಧ್ವನಿಯಿಂದ 'ಸೀತೇ, ಲಕ್ಷ್ಮಣಾ' ಎಂದು ಕೂಗು ಕೇಳಿದರೆ ಸೀತೆಗೆ ಏನಾಗಬೇಕು? ರಾಕ್ಷಸನು ಹೀಗೆ ಕೂಗಿದಾಗ ರಾಮನೇ ಅವಳ ಮನಸ್ಸಿನ ಅವಸ್ಥೆ ಏನಾಗಬೇಕು ಎಂದು ಚಿಂತೆಮಾಡಿದನು.

---

ಶ್ರೀ ಮಾಸ್ತಿ ವೆಂಕಟೇಶ ಅಯ್ಯಂಗಾರ್ ಅವರ

**"ಆದಿಕವಿ ವಾಲ್ಮೀಕಿ"**

ಕೃತಿಯಿಂದ

---

ಕೂಗಿದವನು ರಾಮನಲ್ಲವೆಂದು ಸಾವಿರ ಜನ ಸಾವಿರ ಹೇಳಬಹುದು. ಸೀತೆಗೂ ಸ್ವಲ್ಪವಟ್ಟಿಗೆ ಹಾಗೆ ತೋರಬಹುದಾಗಿತ್ತು. ಆದರೆ ಕೂಗಿದ್ದು ರಾಮನೇ ಆಗಿದ್ದರೆ ಗತಿ ಏನು? ರಾಮನಲ್ಲವೆಂದು ಒಂದೆರಡು ಗಂಟೆ ಕುಳಿತಿದ್ದು ಆಮೇಲೆ ಹೋಗಿ ನೋಡಿ ರಾಮನು ಪೆಟ್ಟುತಿಂದು ನೆಲದಲ್ಲಿ ಬಿದ್ದಿರುವುದನ್ನು ಕಂಡರೆ? ಗಂಡನು ಕೂಗಿದರೂ ಸಹಾಯಕ್ಕೆ ಹೋಗದೆ ನಿಲ್ಲುವುದು ಹೆಂಡತಿಗೆ ಸಾಧ್ಯವೆ? ಈ ಹೆಂಡತಿಗಂತೂ ಅದು ಅಸಾಧ್ಯವಾಯಿತು. ಕೂಗಿಕೊಂಡದ್ದು ನಿಜವಾಗಿಯೂ ರಾಮನಾದರೆ ಲಕ್ಷ್ಮಣನು ಸಹಾಯಕ್ಕೆ ಹೋಗುವುದು ಒಳ್ಳೆಯದೇ ಆಯಿತು. ಕೂಗಿದ್ದು ರಾಮನಲ್ಲದಿದ್ದರೆ ತೊಂದರೆ ಏನು? ಇಬ್ಬರೂ ಹಿಂದಕ್ಕೆ ಬರುವರು. ಅವರು ಬರುವವರೆಗೆ ತಾನು ಒಬ್ಬೊಂಟಿಗಳಾಗಿ ಇರುವುದೊಂದಲ್ಲದೆ ಇದರಿಂದೇನು? ಅಷ್ಟು ಕೊಂಚ ಹೊತ್ತಿನಲ್ಲಿ ಏನಾಗಬಹುದು? ಇದೆಲ್ಲ ರಾಕ್ಷಸರ ಮೋಸವೇ ಆದಲ್ಲಿ ಅಷ್ಟು ಹೊತ್ತಿನಲ್ಲೇ ಏನಾದರೂ ಆಗಬಹುದೆಂದು ಸೀತೆ ಭಯಪಡಬಹುದಾಗಿತ್ತು. ಆದರೆ ಏನೇನು ಆಗಬಹುದೆಂದು ಯೋಚಿಸುವುದಕ್ಕೂ ಆಗಬಹುದಾದ ಅದನ್ನು, ಈಗಾಗಲೇ ಆಗಿರಬಹುದಾದ ಕೇಡಿನೊಂದಿಗೆ ತೂಕಮಾಡಿ ಯಾವುದು ಹೆಚ್ಚು ಎಂದು ನಿರ್ಧರಿಸುವುದಕ್ಕೂ, ಆಗ ಅವಳಿಗೆ ಹೊತ್ತು ಇರಲಿಲ್ಲ, ಮನಸ್ಸೂ ಇರಲಿಲ್ಲ. ರಾಮನಿಗೆ ಏನಾಗಿದೆಯೊ; ಅವನ ಸಹಾಯಕ್ಕೆ ಲಕ್ಷ್ಮಣನು ಹೋಗಬೇಕು: ಅವಳ ಜೀವಕ್ಕೆ ಆಗ ತೋಚಿದ್ದು ಇಷ್ಟು ಮಾತ್ರ. ತನ್ನ ಕರ್ತವ್ಯದ ದೃಷ್ಟಿಯಿಂದ ಲಕ್ಷ್ಮಣನು ಹೋಗುವುದಿಲ್ಲವೆನ್ನಲು ಸೀತೆ ಅವನನ್ನು ಛಡಿಯಂಥ ಮಾತಿನಿಂದ ಹೊಡೆದಳು ಈ ಕಥೆಯನ್ನು ಹೇಳುವಲ್ಲಿ ಕವಿ ಲಕ್ಷ್ಮಣನ ಹೋಗುವುದಿಲ್ಲವೆಂಬ ಮಾತಿನಿಂದ ಸೀತೆಯು 'ನೀನು ನನ್ನ ವಿಷಯದಲ್ಲಿ ದುರಭಿಪ್ರಾಯವನ್ನಿಟ್ಟುಕೊಂಡಿದ್ದೀಯೆ' ಎಂಬ ಮಾತಿಗೆ ಅಂತರವನ್ನೇ ಬಿಟ್ಟಿಲ್ಲ. ಲಕ್ಷ್ಮಣನಿಗೆ ಹೇಳಬಹುದಾದ ಉಳಿದ ಮಾತನ್ನೆಲ್ಲ ಹೇಳಿ ಕೊನೆಗೆ ವಿಧಿಯಿಲ್ಲದೆ ಸೀತೆ ಈ ಕೆಟ್ಟಮಾತನ್ನು ಹೇಳಲಿಲ್ಲ. ಹೋಗುವುದಿಲ್ಲ ಎಂದ ಒಡನೆಯೆ ಕಶಾಪ್ರಹಾರ ಮಾಡಿದಳು. ಲಕ್ಷ್ಮಣನು ರಾಮನ ಸಹಾಯಕ್ಕೆ ಹೋಗದೆ ನಿಂತರೂ ನಿಲ್ಲಬಹುದಾಗಿತ್ತು; ಸೀತೆಯ ಸಹಾಯಕ್ಕೆಂದು ನಿಲ್ಲಲಾಗದೆ ಹೋಯಿತು. ಇದೇ ಸೀತೆಯ ಉದ್ದೇಶ. ತನ್ನ ಪ್ರಿಯನ ಸಲುವಾಗಿ ಅವಳು ಎಣಿಸಬಾರದ ಯೋಚನೆಗೆ ನಾಲಗೆಯಲ್ಲಿ ನುಡಿಯನ್ನು ಕೊಟ್ಟಳು. ಪ್ರಿಯವಾದ ವಸ್ತುವಿಗಾಗಿ ಹೆಂಗಸು ಹೀಗೆ ನಡೆಯುವುದು ಸಹಜ. ಇದು ಬಾಳಿನಲ್ಲಿ ಕಾಣುತ್ತದೆ. ಇದನ್ನು ಕಾವ್ಯ ಅನೇಕಸಲ ಗುರುತಿಸಿದೆ. ನಿಜವಾಗಿ ನೋಡಿದರೆ ಸೀತೆ ಬೆಂಕಿಯನ್ನು ಹೊಕ್ಕಾಗ ತೋರಿಸಿದ ಧೈರ್ಯ ಈ ಮಾತನ್ನಾಡಿದಾಗ ತೋರಿಸಿದುದಕ್ಕಿಂತ ಹೆಚ್ಚಿನದಲ್ಲ. ಲಕ್ಷ್ಮಣನನ್ನು ಕುರಿತು ಇಂಥ ಮಾತನ್ನಾಡಿದರೂ ಸೀತೆಗೆ ಅವನ ವರ್ತನೆಯ ವಿಷಯದಲ್ಲಿ ಸ್ವಲ್ಪವಾದರೂ ಶಂಕೆಯಿರಲಿಲ್ಲ. ರಾವಣನು ಬಂದು ತನ್ನನ್ನು ಕದ್ದ ವೇಳೆಯಲ್ಲಿ ಅವಳು ಮೊದಲು ಕರೆದದ್ದು ಲಕ್ಷ್ಮಣನ ಹೆಸರನ್ನು. ಹನುಮಂತನು ಪತಿಯ ಸಂದೇಶವನ್ನು ತಂದಾಗ ಅವಳು ಲಕ್ಷ್ಮಣನು ಬಹಳವಾಗಿ ಪ್ರಶಂಸಿಸಿದಳು. ಅವನು ತನಗಾಗಿಯೂ ರಾಮನಿಗಾಗಿಯೂ ಸ್ವಾರ್ಥವನ್ನು ತ್ಯಾಗಮಾಡಿದ್ದನೆನ್ನುವುದನ್ನು ಅವಳ ಮನಸ್ಸು ಕಂಡಿತ್ತು. ರಾಮನು ತನ್ನನ್ನು ಅವಮಾನ ಪಡಿಸಿದಾಗ ಅವಳು "ಚಿತಾಂ ಮೇ ಕುರು ಸೌಮಿತ್ರೇ" ಎಂದು ತನಗೆ ಚಿತೆಯನ್ನು ಮಾಡೆಂದು ಲಕ್ಷ್ಮಣನಿಗೆ ಹೇಳಿದಳು. ಈ ಮಾತಿನ ರೀತಿಯಲ್ಲೆಲ್ಲ ಕವಿ ಉತ್ತಮಸ್ತ್ರೀ ಹೃದಯ ಒಂದರ ಸ್ವಭಾವವನ್ನು ಹೊರಗೆಡಹಿದ್ದಾನೆ. ಹೀಗೆಯೇ ಇತರ ಸಂದರ್ಭಗಳಲ್ಲಿ ಸೀತೆಯ ಉತ್ತಮವಾದ ಸ್ತ್ರೀ ಸಹಜವಾದ ಸ್ವಭಾವ ಕಾಣುವುದು. ತನ್ನ ಮಗನ ವಿಷಯದಲ್ಲಿ ಗೌರವದಿಂದ ನಡೆದುಕೊ ಎಂದು ಕೌಸಲ್ಯೆ ತನಗೆ ಹೇಳಿದಾಗ ಸೀತೆ ಅವಳಿಗೆ, "ನೀನು ಹೇಳದೆಯೇ ನಾನು ಅವನೊಂದಿಗೆ ಕಾಡಿಗೆ ಹೊರ

ಶ್ರೀ ಪದ್ಮಾವತೀ



ದೇವಾಲಯ

ಅರ್ಜಿತ ಅಭಿಷೇಕ

ತಿರುಚಾನೂರಿನಲ್ಲಿನ ಪದ್ಮಾವತೀದೇವಿಗೆ ಪ್ರತಿ ಶುಕ್ರವಾರವೂ ಅರ್ಜಿತ ಅಭಿಷೇಕ ಸೇವೆ ಏರ್ಪಾಟು ಮಾಡಲಾಗಿದೆ. ಟಿಕೆಟ್ಟಿಗೆ ರೂ. 100/- ಸಲ್ಲಿಸಿ ಗೃಹಸ್ಥರು ಭಾಗವಹಿಸಬಹುದು. ಗೃಹಸ್ಥರು, ಅವರ ಸಂಬಂಧೀಕರು ಒಟ್ಟು ಇಬ್ಬರು ವ್ಯಕ್ತಿಗಳು ಕ್ಷೀರ ಪಾತ್ರೆಗಳನ್ನು ಆಲಯದಲ್ಲಿ ಮೆರವಣಿಗೆಯಲ್ಲಿ ಕೊಂಡು ಹೋಗಲು ಅನುಮತಿಸಲ್ಪಡುವರು. ಅನಂತರ ಅವರು ಅಭಿಷೇಕ ದರ್ಶನ ಮಾಡಬಹುದು. ಆದರೆ ಪ್ರಸಾದಮಾತ್ರ ಕೊಡಲ್ಪಡುವುದಿಲ್ಲ. ಭಕ್ತರು ಈ ಸದವಕಾಶವನ್ನು ಉಪಯೋಗಿಸಿಕೊಳ್ಳಬಹುದು.

ಟಿದ್ದೇನೆ. ನೀನು ಹೇಳಿಕೊಡತಕ್ಕದ್ದೇನು," ಎಂದು ಉತ್ತರ ಕೊಡಬಹುದಾಗಿತ್ತು. ಅವಳು ಹಾಗೆ ಹೇಳಲಿಲ್ಲ, ಅತ್ರಿಯ ಮಾತನ್ನು ಅಂಗೀಕರಿಸಿದಳು. ಅನಸೂಯಾದೇವಿ ತನ್ನ ಕಥೆಯನ್ನು ಕೇಳಿದಾಗ ಈ ತರುಣ ಸತಿ ಹಿರಿಯರಲ್ಲಿ ಕಿರಿಯರು ಬಿನ್ನವಿಸಿಕೊಳ್ಳುವ ರೀತಿಯಲ್ಲಿ ತನ್ನ ಬಾಲ್ಯದ ವೃತ್ತಾಂತವನ್ನೂ, ವಿವಾಹದ ವಿಷಯವನ್ನೂ ರಾಮನ ವರ್ತನದ ವಿವರವನ್ನೂ ಸರಳತೆಯಿಂದ ಸಂತೋಷದಿಂದ ಹೆಮ್ಮೆಯಿಂದ ಅರಿಕೆಮಾಡಿದಳು ಅನಸೂಯೆ ಪತಿವ್ರತೆಯ ಧರ್ಮವನ್ನು ಉಪದೇಶ ಮಾಡಲು, ದೇವಿ ಆ ಮೊದಲು ಅತ್ರಿಯ ಮಾತನ್ನು ಅಂಗೀಕರಿಸಿದ್ದಂತೆ ಆ ಮಾತನ್ನೂ ನಮ್ರತೆಯಿಂದ ಅಂಗೀಕರಿಸಿದಳು ಸೀತೆ ರಾಮನಿಗೆ ಅವನ ಕರ್ತವ್ಯದ ವಿಷಯವಾಗಿ ಬುದ್ಧಿ ಹೇಳುವುದಕ್ಕೂ ಹಿಂದೆಗೆಯಲಿಲ್ಲ. ಆದನ್ನು ಹೇಳುವುದರಲ್ಲಿ ಅವನ ಆತ್ಮಗೌರವಕ್ಕೆ ಕುಂದು ಬಾರದಂತೆ, "ಇದು ನಿನಗೆ ತಿಳಿಯದ ವಿಷಯವಲ್ಲ ಆದರೂ ಜ್ಞಾಪಕ ಕೊಡುತ್ತೇನೆ," ಎಂದು ಹೇಳಿದಳು. ಅವಳು ಹೀಗೆ ವಹಿಸಿಕೊಂಡ ಅಧಿಕಾರವನ್ನು ರಾಮನೂ ಒಪ್ಪಿಕೊಂಡನು; ತನ್ನ ನಡೆಗೆ ಕಾರಣವೇನೆಂದು ವಿವರಿಸಿ ಅವಳ ಮಾತಿಗೆ ಸಮಾಧಾನ ಹೇಳಿದನು. ರಾವಣನು ತನ್ನನ್ನು ಕದ್ದಾಗ ಸೀತಾದೇವಿ ವನದ ಎಲ್ಲ ಸತ್ವಗಳಿಗೂ ಹಾಕಿದ ಶರಣು ಹೆಣ್ಣು ರೀತಿಯದು. ರಾವಣನಿಗೆ ಅವಳು ಹೇಳುವ ಎಲ್ಲ ಮಾತು ಅವನ ವಿಷಯದಲ್ಲಿ ನಡೆದ ಎಲ್ಲ ನಡೆಯೂ ವಿವರ ವಿವರವಾಗಿ ಸ್ತ್ರೀ ಸ್ವಭಾವಕ್ಕೆ ಸಹಜವಾಗಿದೆ. ಹೀಗೆಯೇ ಹನುಮಂತನು ಬಂದಾಗ ರಾಮಲಕ್ಷ್ಮಣರ ಆರೋಗ್ಯವನ್ನು ಕುರಿತು ಕೇಳಿ, ರಾಮನಿಗೆ ತನ್ನ ವಿಷಯದಲ್ಲಿ ಪ್ರೀತಿ ಎಷ್ಟೆಂದು ಹೇಳಿ, ರಾಮನು ತನ್ನನ್ನು ಬಿಡಿಸಿಕೊಳ್ಳಲು ಬೇಗನೆ ಬರುವಂತೆ ಮಾಡು ಎಂದು ಬೇಡಿ, ವಿಶ್ಲೇಷದ ಆ ವೇಳೆಯಲ್ಲಿ, ತನ್ನ ಕಷ್ಟ ಅಲ್ಲ, ರಾಮನ ಕಷ್ಟ ಎಂದಿಗೆ ತೀರುವುದೋ ಎಂದು ಹಂಬಲಿಸಿದ ಇವಳ ಮಾತಿನಲ್ಲೆಲ್ಲ ಉತ್ತಮ ಸ್ತ್ರೀತ್ವದ ನಿಸರ್ಗ ಸರಳತೆ ಕಾಣುತ್ತದೆ. ದೂರನ್ನು ಹೊರಲಾರದೆ ಅಗ್ನಿಯನ್ನು ಹೊಕ್ಕು ಉತ್ತರಕ್ಷಣದಲ್ಲಿ ಪತಿ ಕೈಚಾಚಲು ಸಂತೋಷದಿಂದ ಅದನ್ನು ಆಶ್ರಯಿಸಿದ ಇವಳ ಕ್ಷಮಾಗುಣವೂ ಈ ಸರಳತೆಯ ಫಲ. ಈ ಕ್ಷಮೆ ಮುಂಬೇಸಗೆಯ ಬಿಸಿಲಿಗೆ ಒಣಗಿ ಹಳದಿಯಾಗಿರುವ ಭೂಮಿ, ಮುಂಗಾರಿನ ಒಂದು ಹನಿಯಿಂದ ಮತ್ತೆ ಹಸುರಾಗುವ ರೀತಿಯದು. ಭೂಮಿ ಹೇಗೋ ಹಾಗೆ ಸೀತೆ ಕ್ಷಮಾಶೀಲಳು. ಈ ಕ್ಷಮೆಯ ಮೂಲ ಅಸೀಮವಾದ ಒಂದು ಕನಿಕರ. ಸಾಯುತ್ತೇನೆಂದು ಚಿತೆಯನ್ನು ಹೊತ್ತಿಸಿ ದೇವಿ ತಾನು ತೀರಿಕೊಂಡರೆ ಗಂಡನ ಗತಿ ಏನೆಂದು ನೆನೆದು ಅಗ್ನಿ ತನ್ನನ್ನು ರಕ್ಷಿಸಲೆಂದು ಬೇಡಿದಳೆಂದು ಕಾಣುತ್ತದೆ ಆರ್ಯ ಜೀವನಕ್ಕೆ ಕರುಣೆ ಕರ್ತವ್ಯವೆನ್ನುವುದು ರಾಕ್ಷಸರನ್ನು ಕುರಿತು ಮಾತ್ರವಲ್ಲ, ಆರ್ಯನನ್ನು ಕುರಿತೂ ನಿಜ. ತನ್ನ ಈ ಕನಿಕರ, ಈ ಕ್ಷಮೆಯಿಂದ ಸೀತಾದೇವಿ ಸ್ತ್ರೀಕುಲದ ಮಹಾಮಣಿಯಾದಳು, ಸ್ತ್ರೀಯರಿಗೆ ಆದರ್ಶವಾದಳು. ಲಂಕೆಯನ್ನು ಬಿಟ್ಟು ಅಯೋಧ್ಯೆಗೆ ಬರುತ್ತ ರಾಮನು ಕಿಷ್ಕಿಂಧೆಯನ್ನು ತೋರಿಸಲು ಸೀತೆ ಸುಗ್ರೀವನ ಸಂಸಾರವನ್ನು ನೋಡಬೇಕೆಂದೂ ಅದನ್ನು ಅಯೋಧ್ಯೆಗೆ ಕರೆದುಕೊಂಡು ಹೋಗಬೇಕೆಂದೂ ಅಪೇಕ್ಷಿಸಿದಳು. ಅವಳು ಎಷ್ಟು ಸ್ನೇಹಪರಳೆಂದು ಇದರಿಂದ ಕಾಣುತ್ತದೆ. ಈ ಸ್ನೇಹಪರತೆ ಎಂಥ ಆನಂದದಲ್ಲಿಯೂ ಅವಳನ್ನು ಬಿಡಲಿಲ್ಲ. ಪೈತಾಮಹವಾದ ರಾಜ್ಯದಲ್ಲಿ ಪತಿಯೊಡನೆ ಅಭಿಷಿಕ್ತಳಾದ ವೇಳೆ ರಾಮನು ಅವಳಿಗೆ ಒಂದು ರತ್ನಾಭರಣವನ್ನು ಕೊಡಲು ಸೀತೆ ಅದನ್ನು ತನ್ನ ಎಲ್ಲ ಸುಖಕ್ಕೆ ಕಾರಣನಾದ ಹನುಮಂತನಿಗೆ ಕೊಡಲು ಅಪೇಕ್ಷಿಸಿದಳು. ರಾಮನು ಈ ಇಂಗಿತವನ್ನು ಅನುಮೋದಿಸಲು ಅವಳು ಆ ಹಾರವನ್ನು ಹನುಮಂತನಿಗೆ ಒಪ್ಪಿಸಿದಳು. ಸೀತೆ ಹಗೆಯ ಊರಿನಲ್ಲಿ ಭಯಶೋಕಗಳ ಆಳದಲ್ಲಿ ಒಬ್ಬಳೇ ಸೊರಗುತ್ತಿದ್ದಾಗ ಬಿಡುಗಡೆಯ ಆಸೆ ಅವಳಿಗೆ ಹನುಮಂತನ ರೂಪದಲ್ಲಿ ಬಂದಿತು. ಅವನು ಬರುವವರೆಗೆ ಒಂದೇ ಸಮನೆ ಕವಿದಿದ್ದ ಕಾರಿರುಳು ಅವನಿಂದ ಬೆಳಗಾಯಿತು ಕಳೆದುಕೊಂಡ ಭಾಗ್ಯದ ಪುನರ್ಲಾಭ ಸಾಧ್ಯವೆಂದು ಅವನಿಂದ ಅವಳಿಗೆ ತಿಳಿಯಿತು. ಆದ್ದರಿಂದ ಅವಳು ಅವನನ್ನು ತನ್ನ ಶುಭದ ಲಾಂಛನವೆಂದು ಬಗೆದಳು. ಅವನು ರಾಮನಿಗೆ ತನ್ನ ವಿಷಯವನ್ನು ಹೇಳುವುದಕ್ಕೆ ಹೊರಟು ಸಿದ್ಧನಾದಾಗ ಸೀತೆ ಅವನಿಗೆ, ಒಂದುದಿನ ಇಲ್ಲಿ ಇದ್ದು ಹೋಗು, ಎಂದು ಹೇಳಿದಳು ತನ್ನ ವರ್ತಮಾನ ರಾಮನನ್ನು ಸೇರಬೇಕು; ರಾಮನು ಬಂದು ತನ್ನನ್ನು ಬಿಡಿಸಿಕೊಳ್ಳಬೇಕು; ಇದರಲ್ಲಿ ವಿಳಂಬ ಆಗಬಾರದು ಆದರೂ ಒಂದು ದಿನದ ವಿಳಂಬವನ್ನು ಸೀತೆ ತಾನೇ ಬೇಡಿದಳು. ಇದರಿಂದ ಸೀತೆಯ ಮನಸ್ಸಿಗೆ ಹನುಮಂತನು ಎಷ್ಟು ಹಿತವಾಗಿ ಕಂಡನೆಂದು ನಾವು ಊಹಿಸಬಹುದಾಗಿದೆ. ರಾಮನ ಅಂಗುಳೀಯಕದಂತೆ ಹನುಮಂತನು ಅವಳಿಗೆ ಮೂರ್ತೀಭವಿಸಿದ ಪತಿಸಂದೇಶವೆಂದು ಕಂಡನು. ಆದರಿಂದ ಅವಳು ಆ ಸೇವಕನಿಗೆ ಇನ್ನು ಯಾರಿಗೂ ಮಾಡದ ಮರ್ಯಾದೆಯನ್ನು ಮಾಡಿದಳು. ಪ್ರಪಂಚದ ಕಾವ್ಯನಾಯಕಿಯರಲ್ಲಿ ಪ್ರಸಿದ್ಧರಾದ ನಾಯಕಿಯರ ಮಧ್ಯೆ ಸೀತಾದೇವಿ ಅಗ್ರಗಣ್ಯಳು. ಕಾವ್ಯ ಇದಕ್ಕೆ ಹೆಚ್ಚಿನದನ್ನು ಕಂಡಿಲ್ಲ; ಇದಕ್ಕೆ ಹೆಚ್ಚಿನದನ್ನು ಚಿತ್ರಿಸಿಲ್ಲ.

---



ಈಚೆಗೆ ವಿಶಾಖಪಟ್ಟಣದಲ್ಲಿ ನಡೆದ ಹರಿದಾಸ ಸಮ್ಮೇಳನದಲ್ಲಿ ಮೈಸೂರಿನ ಮಹಿಳಾ ಮಂಡಳಿಯವರು ಸಂಯೋಜಿಸಿದ ಬಾಲಿಕೆಯರ ನೃತ್ಯ ವೃಂದದೊಡನೆ ಶ್ರೀಗುರುಗೋವಿಂದ ವಿಠಲದಾಸರು.

( 12ನೇ ಪುಟದಿಂದ)

ಅಲ್ಲಿಯ ತಪಸ್ವಿಗಳಿಗೆ ಅಭಯವನ್ನು ನೀಡಿದರು. ರಾವಣನ ತಂಗಿಯಾದ ಶೂರ್ಪನಖಿಯು ರಾಮ ಲಕ್ಷ್ಮಣರಿದ್ದಲ್ಲಿಗೆ ಬಂದು ಕಾಮಾಂಧಳಾಗಿ ವಾಮಮಾರ್ಗದಿಂದ ಅವರನ್ನು ಬಲವಂತ ಪಡಿಸಿದಾಗ ಲಕ್ಷ್ಮಣನು ಅಣ್ಣನ ಆಜ್ಞೆಯಂತೆ ಅವಳ ಎರಡೂ ಕಿವಿ, ಮೂಗುಗಳನ್ನು ತರಿದು ವಿರೂಪಗೊಳಿಸಿದನು. ದಂಡಕಾರಣ್ಯದ ಎಲ್ಲ ಮುನಿಗಳ ರಕ್ಷಣೆಗಾಗಿ ಖರದೂಷಣ ಮುಂತಾದ ದುಷ್ಟರಾಕ್ಷಸರನ್ನು ಸಂಹರಿಸಿದನು. ರಾವಣನಿಂದ ಸಾಯುವುದಕ್ಕಿಂದ ರಾಮನಿಂದ ಸಾವೇ ಲೇಸೆಂದು ಬಗೆದು – ರಾವಣ ಒತ್ತಾಯಕ್ಕೆ ಮಣಿದು ಸೀತಾಪಹರಣ ಕಾರ್ಯದಲ್ಲಿ ರಾವಣನಿಗೆ ನೆರವಾಗಲು ಮಾರೀಚನು ಚಿನ್ನದ ಜಿಂಕೆಯ ರೂಪ ಧರಿಸಿ ಸೀತೆಯ ಮುಂದೆ ಸುಳಿದಾಡಿದ. ಆ ಮಾರೀಚ ರಾಕ್ಷಸನನ್ನು ರಾಮನು ಬೆನ್ನಟ್ಟಿ ಸಂಹರಿಸಿದನು. ಸೀತಾನ್ವೇಷಣೆಗಾಗಿ ಹೊರಟ ರಾಮನು ಸುಗ್ರೀವನ ಸ್ನೇಹ ಬೆಳೆಸಿದನು. ನಿರಪರಾಧಿ ಸುಗ್ರೀವನ ಹೆಂಡತಿಯನ್ನು ಅಪಹರಿಸಿದ ದುಷ್ಟನಾದ ತಾರೆಯ ಎದೆಯರಸ ವಾಲಿಯನ್ನು ನಿಗ್ರಹಿಸಿ ನಿಷ್ಕಂಟಕವಾದ ರಾಜ್ಯವನ್ನು ಸುಗ್ರೀವನಿಗೆ ಕೊಟ್ಟು ಅವನನ್ನು ಕಿಷ್ಕಿಂಧಾಧಿಪತಿಯನ್ನಾಗಿ ಮಾಡಿದನು.

## ಗೌತಮ ಉವಾಚ

ದೂತೋ ದಾಶರಥೇ; ಸಲೀಲಮುದಧಿಂ
ತೀರ್ತ್ವಾ ಹನೂಮಾನ್ ಮಹಾನ್
ದೃಷ್ಟ್ವಾsಶೋಕವನೇ ಸ್ಥಿತಾಂ ಜನಕಜಾಂ
ದತ್ವಾಂಗುಲೀಮುದ್ರಿಕಾಂ ।
ಅಕ್ಷಾದೀನಸುರಾನ್ ನಿಹತ್ಯ ಮಹತೀಂ
ಲಂಕಾಂಚ ದಗ್ಧ್ವಾ ಪುನಃ
ಶ್ರೀರಾಮಂಚ ಸಮೇತ್ಯ ದೇವ ಜನನೀ
ದೃಷ್ಟಾನುಯೇತ್ಸಬ್ರವೀತ್ ॥೫॥

ಸೀತಾನ್ವೇಷಣೆಗಾಗಿ ಸುಗ್ರೀವ ಕಳಿಸಿದ ಕಪಿಸೈನ್ಯದಲ್ಲಿ ನಿಜವಾದ ರಾಮದೂತ ಹನುಮಂತನೊಬ್ಬನೆ. ಬಲ, ಜ್ಞಾನ ಮುಂತಾದವುಗಳಲ್ಲಿ 'ಮಹಾನ್'' ಎನಿಸಿದ ಈ ರಾಮದೂತ ಮಾರುತಿ ಅಪಾರವಾದ ಸಮುದ್ರವನ್ನು ಲೀಲಾಜಾಲವಾಗಿ ದಾಟಿ, ರಾವಣನ ಅಶೋಕವನದಲ್ಲಿ ಸೀತಾಮಾತೆಯನ್ನು ಕಂಡು ರಾಮನ ಸಂದೇಶಹಾಗೂ ಉಂಗುರವನ್ನು ಆ ದೇವಿಗೆ ತಲುಪಿಸಿ, ತನ್ನನ್ನು ಹಿಡಿಯಲು ಬಂದ ಅಕ್ಷಕುಮಾರ ಮೊದಲಾದ ರಾಕ್ಷಸರನ್ನು ಸಂಹರಿಸಿ, ತನ್ನ ಬಾಲಕ್ಕೆ ಹಚ್ಚಿದ್ದ ಬೆಂಕಿಯಿಂದ ಅಶೋಕವನ ಒಂದನ್ನು ಬಿಟ್ಟು ಲಂಕಾಪಟ್ಟಣವನ್ನೆಲ್ಲ ಸುಟ್ಟು ಮತ್ತೆ ತನ್ನ ಒಡೆಯ ಶ್ರೀರಾಮಚಂದ್ರನ ಬಳಿಗೆ ಬಂದು "ದೇವ ಶ್ರೀರಾಮಚಂದ್ರ, ಜಗನ್ಮಾತೆಯಾದ ಸೀತಾದೇವಿಯನ್ನು ಕಂಡು ಬಂದಿದ್ದೇನೆ" ಎಂದು ಸೀತಾನ್ವೇಷಣೆ ಬಗ್ಗೆ ಮುಖ್ಯ ಸುದ್ದಿಯನ್ನು ತಿಳಿಸಿದನು.

## ಜಮದಗ್ನಿ ಉವಾಚ

ರಾಮೋ ಬದ್ಧಪಯೋನಿಧಿಃ ಕಪಿವರೈಃ
ವೀರೈರ್ನಲಾದ್ಯೈರ್ವೃತೋ
ಲಂಕಾಂ ಪ್ರಾಪ್ಯ ಸಕುಂಭಕರ್ಣತನುಜಂ
ಹತ್ವಾ ರಣೇ ರಾವಣಂ ।
ತತ್ರಾಸ್ಥಾಪ್ಯ ವಿಭೀಷಣಂ ಪುನರಸೌ
ಸೀತಾಪತಿಃ ಪುಷ್ಪಕಾ
ರೂಢಃ ಸನ್ ಪುರಮಾಗತಃ ಸಭರತಃ
ಸಿಂಹಾಸನಸ್ಥೋ ಬಭೌ ॥೬॥

ರಾಮನು ಹನುಮಂತ, ನಲ, ಜಾಂಬವಂತ ಮೊದಲಾದ ಕಪಿಶ್ರೇಷ್ಠರಿಂದ ಲಂಕೆಗೆ ಹೋಗಲು ಸಮುದ್ರಕ್ಕೆ ಸೇತುವೆ ನಿರ್ಮಾಣಮಾಡಿಸಿದನು. ಎಲ್ಲ ಕಪಿಸೈನ್ಯದಿಂದೊಡಗೂಡಿ ಲಂಕಾಪಟ್ಟಣಕ್ಕೆ ಬಂದನು. ಅಲ್ಲಿ ರಾಮ–ರಾವಣರಲ್ಲಿ ಹಾಗೂ ಇತರ ರಾಕ್ಷಸರಲ್ಲಿಯೂ ಘೋರ ಯುದ್ಧ ನಡೆಯಿತು. ರಾವಣ, ಅವನ ಮಗ, ಹಾಗೂ ಕುಂಭಕರ್ಣ ಮುಂತಾದ ರಾಕ್ಷಸರೆಲ್ಲರನ್ನೂ ಸಂಹರಿಸಿದ ನಂತರ ಭಕ್ತನಾದ ವಿಭೀಷಣನನ್ನು ಲಂಕೆಯ ಸಿಂಹಾಸನದಲ್ಲಿ ಕುಳ್ಳಿರಿಸಿ ಅವನನ್ನು ಲಂಕಾಧಿಪತಿಯನ್ನಾಗಿ ಮಾಡಿದನು. ಹದಿನಾಲ್ಕು ವರ್ಷ ವನವಾಸ ಮುಗಿದಿದ್ದರಿಂದ ರಾಮನು ಪುಷ್ಪಕ ವಿಮಾನವೇರಿ ಸೀತಾ ಲಕ್ಷ್ಮಣರೊಂದಿಗೆ ಆಯೋಧ್ಯೆಗೆ ಮರಳುವನು. ರಾಮನ ಬರುವನ್ನೇ ಇದಿರುನೋಡುತ್ತಿದ್ದ ಭರತ ರಾಜ್ಯವನ್ನೆಲ್ಲ ಮರಳಿ ರಾಮನಿಗೆ ಒಪ್ಪಿಸುವನು. ರಾಮನು ಪಟ್ಟಾಭಿಷಿಕ್ತನಾಗಿ ಆಯೋಧ್ಯೆ ದೊರೆಯಾಗಿ ಬೆಳಗುವನು. ತಮ್ಮನಾದ ಭರತನಿಗೆ ಯೌವರಾಜ್ಯಾಭಿಷೇಕ ಮಾಡಿ ಅನುಗ್ರಹಿಸುವನು.

## ವಸಿಷ್ಠ ಉವಾಚ

ಶ್ರೀರಾಮೋ ಹಯಮೇಧ ಮುಖ್ಯ
ಮಖಕೃತ್ ಸಮ್ಯಕ್ ಪ್ರಜಾಃ ಪಾಲಯನ್
ಕೃತ್ವಾ ರಾಜ್ಯಮಥಾನುಜೈಶ್ಚ
ಸುಚಿರಂ ಭೂರಿ ಸ್ವಧರ್ಮಾನ್ವಿತಃ ।
ಪುತ್ರಾ ಭ್ರಾತೃಸಮನ್ವಿತಾ
ಕುಶಲವೌ ಸಂಸ್ಥಾಪ್ಯ ಭೂಮಂಡಲೇ
ಸೋsಯೋಧ್ಯಾ ಪುರವಾಸಿಭಿಶ್ಚ
ಸರಯೂಸ್ನಾತಃ ಪ್ರಪೇದೇದಿವಂ ॥೭॥

ಶ್ರೀರಾಮನು ಆಯೋಧ್ಯೆಯ ಸಿಂಹಾಸನದಲ್ಲಿ ಪಟ್ಟಾಭಿಷಿಕ್ತನಾದ ನಂತರ 'ಅಶ್ವಮೇಧ'ವೇ ಮೊದಲಾದ ಅನೇಕ ಯಜ್ಞ–ಯಾಗಾದಿಗಳನ್ನು ಮಾಡಿದನು. ಎಲ್ಲ ಪ್ರಜೆಗಳನ್ನೂ ಸಂತೋಷಗೊಳಿಸುವಂತೆ ರಾಜ್ಯವಾಳಿ 'ರಾಜ' ಶಬ್ದದ ಅರ್ಥವನ್ನು ಸಾರ್ಥಕಗೊಳಿಸಿದನು. ತನ್ನ ಸಹೋದರರಿಂದೊಡಗೂಡಿ ಧರ್ಮದಿಂದ ಬಹುಕಾಲ ರಾಜ್ಯವಾಳಿದನು. ಕೊನೆಗೆ ತನ್ನ ಹಾಗೂ ಸಹೋದರರ ಮಕ್ಕಳನ್ನು ಭೂಮಂಡಲದ ಆಧಿಪತ್ಯದಲ್ಲಿ ನೇಮಿಸಿದನು. ನಂತರ ಮೋಕ್ಷಕ್ಕೆ ಬರಲಿಚ್ಛಿಸುವವರೆಲ್ಲರೂ ಬರಬಹುದೆಂದು ಡಂಗುರ ಹೊಡೆಸಿದನು, ಮೋಕ್ಷಯೋಗ್ಯ ಜೀವಿಗಳೆಲ್ಲ ರಾಮನಿದ್ದಲ್ಲಿಗೆ ಧಾವಿಸಿ ಬಂದರು. ಶ್ರೀರಾಮನ ಆದೇಶದಂತೆ ಅವರೆಲ್ಲರೂ ಸರಯೂ ನದಿಯಲ್ಲಿ ಸ್ನಾನಮಾಡಿದರು. ಆ ಎಲ್ಲ ಭಕ್ತ ಪರಿವಾರದೊಂದಿಗೆ ರಾಮನು ಪರಂಧಾಮಕ್ಕೆ ಪ್ರಯಾಣ ಬೆಳಸಿದನು.

## ಸಪ್ತರ್ಷಯ ಊಚುಃ

ಶ್ರೀರಾಮಸ್ಯ ಕಥಾಸುಧಾತಿಮಧುರಾನ್
ಶ್ಲೋಕಾನಿಮಾನುತ್ತಮಾನ್
ಯೇ ಶೃಣ್ವಂತಿ ಪಠಂತಿ ಚ ಪ್ರತಿದಿನಂ
ತೇsಘೌಘವಿಧ್ವಂಸಿನಃ ।
ಶ್ರೀಮಂತೋ ಬಹುಪುತ್ರ ಪೌತ್ರಸಹಿತಾ
ಭುಕ್ತ್ವೇಹ ಭೋಗಾನ್ ಚಿರಂ
ಭುಂಜಂತಶ್ಚ ಸದಾರ್ಚಿತಂ ಸುರಗಣೈಃ
ವಿಷ್ಣೋರ್ಲಭಂತೇ ಪದಂ ॥೮॥

ಈ ಎಲ್ಲ ಆರ್ಷಪದ್ಯಗಳೂ ಅತ್ಯಂತ ಮಧುರವಾಗಿದೆ, ಅದಕ್ಕೆ ಕಾರಣ ಇವುಗಳು ತುಂಬೆಲ್ಲ ಸುತ್ತ ಮುತ್ತ ಹತ್ತಿದ, ಮೆತ್ತಿದ,ಮುತ್ತಿದ,ಅಮೃತಪ್ರಾಯವಾದ ರಾಮನ ಕಥೆ. ರಾಮಮಹಿಮರೂಪವಾದ ಈ ಸಪ್ತರ್ಷಿರಾಮಾಯಣದ ಪ್ರತಿನಿತ್ಯಪಾರಾಯಣ ಹಾಗೂ ಶ್ರವಣದಿಂದ, ಪಠಿಸುವವರ ಹಾಗೂ ಕೇಳುವವರ ಎಲ್ಲ ರೀತಿಯಪಾಪಗಳೂ ನಾಶವಾಗುವುವು. ಸಪ್ತರ್ಷಿರಾಮಾಯಣದ ಅನುದಿನ ಪಾರಾಯಣದಿಂದ ಮುಖದಲ್ಲಿ ವರ್ಚಸ್ಸು, ಹಾಗೂ ಎಲ್ಲ ರೀತಿಯ ಸಂಪತ್ತು ಮಕ್ಕಳು, ಮೊಮ್ಮಕ್ಕಳು ಮುಂತಾದ ಅಪಾರ ಬಂಧುವರ್ಗವನ್ನೂ ಪಡೆದು ಇಲ್ಲಿ ಎಲ್ಲ ತರಹದ ಸುಖಸಮೃದ್ಧಿಗಳನ್ನು ಬಹಳಕಾಲದವರೆಗೆ ಅನುಭವಿಸಿ ಸಾಮಾನ್ಯರಿಗೆ ದುರ್ಲಭವಾದ, ದೇವವಂದ್ಯವಾದ ಮುಕ್ತಿಯನ್ನು ಪಡೆದು ಆ ವಿಷ್ಣುವಿನ ಸ್ಥಳದಲ್ಲಿದ್ದು ಎಲ್ಲ ಸುಖಭೋಗಗಳನ್ನು ಅನುಭವಿಸುತ್ತಾರೆ



## ಕಿಶೋರ ಜಗತ್

# ಸೀತಾನ್ವೇಷಣೆ

ಲಂಕೆಯು ಬಹಳ ಸುಂದರವಾಗಿತ್ತು. ಉದ್ಯಾನವನಗಳು, ಹೂವುಹಣ್ಣುಗಳು ತುಂಬಿದ್ದ ಗಿಡ ಮರಗಳಿಂದ ಶೋಭಿಸುತ್ತಿದ್ದವು. ಅಂದವಾದ ಅರಮನೆಗಳೂ, ಉಪ್ಪರಿಗೆಗಳೂ ರಾಜ ಮಾರ್ಗದಲ್ಲಿ ಕಂಗೊಳಿಸುತ್ತಿದ್ದವು. ಲಂಕಾನಗರದ ಸುತ್ತಲೂ ಬಲವಾದ ಕೋಟೆಯನ್ನು ಕಟ್ಟಿದ್ದರು. ಬಲಿಷ್ಟರಾದ ರಾಕ್ಷಸರು ಹಗಲಿರುಳೂ ಅದನ್ನು ರಕ್ಷಿಸುತ್ತಿದ್ದರು

ಲಂಕಾನಗರವನ್ನು ಪ್ರವೇಶಿಸಲು ಹನುಮಂತನು ಊರಿನ ಹೆಬ್ಬಾಗಿಲ ಬಳಿ ಬಂದ. ನಗರವನ್ನು ರಕ್ಷಿಸುತ್ತಿದ್ದ ಲಂಕಾದೇವಿಯು ಅರ್ಭಟಿಸುತ್ತ ಅಡ್ಡಬಂದಳು. ಹನುಮಂತನಿಗೆ ಬಲವಾದ ಒಂದು ಪೆಟ್ಟು ಕೊಟ್ಟಳು. ಹನುಮಂತನು ಗಟ್ಟಿಯಾಗಿ ಗರ್ಜಿಸುತ್ತಾ ಅವಳನ್ನು ಎತ್ತಿ ಕುಕ್ಕಿದನು. ಆಗ ಅವಳಿಗೆ ಜ್ಞಾನೋದಯವಾಯಿತು. 'ವಾನರೋತ್ತಮ, ನನ್ನದು ತಪ್ಪಾಯಿತು. ದಯವಿಟ್ಟು ನನ್ನನ್ನು ಕ್ಷಮಿಸು. ಲಂಕಾ ದೇವತೆಯನ್ನು ವಾನರನೊಬ್ಬನು ಹೊಡೆದಾಗ ರಾಕ್ಷಸರಿಗೆ ಆಪತ್ತು ಬರುತ್ತದೆ ಎಂದು ಬ್ರಹ್ಮನು ಹಿಂದೆಯೇ ಹೇಳಿದ್ದ. ಈಗ ಆ ಕಾಲ ಬಂದಿದೆಯೆಂದು ಕಾಣುತ್ತದೆ. ನಾನು ನಿನ್ನನ್ನು ತಡೆಯುವುದಿಲ್ಲ. ಲಂಕಾನಗರವನ್ನು ಪ್ರವೇಶಿಸಿ ನಿನ್ನ ಇಚ್ಛೆಬಂದಂತೆ ಮಾಡು' ಎಂದು ಹೇಳಿದಳು.

ಶತ್ರುರಾಜ್ಯವಾದ ಲಂಕೆಯನ್ನು ಹನುಮಂತನು ಹೆಬ್ಬಾಗಿಲಿನಿಂದ ಪ್ರವೇಶಿಸಲು ಇಚ್ಛಿಸಲಿಲ್ಲ. ಕೋಟೆಯ ಗೋಡೆಯನ್ನು ಹಾರಿ ಪುರ ಪ್ರವೇಶ ಮಾಡಿದನು. ಹನುಮಂತನು ಲಂಕೆಗೆ ಹೋದಾಗ ರಾತ್ರಿಯಾಗಿತ್ತು. ಅವನು ರಾಜ ಬೀದಿಯಲ್ಲಿ ನಡೆಯುತ್ತ ಹೋದನು. ನಗರದಲ್ಲಿ ಎತ್ತನೋಡಿದರೂ ಎತ್ತರವಾದ ಕಟ್ಟಡಗಳು. ಆ ಕಟ್ಟಡಗಳಿಂದ ನೃತ್ಯಗಾತಿಯರ ಗೆಜ್ಜೆಯ ಸದ್ದೂ ಅಪ್ಸರೆಯರ ಗಾನವೂ ಕೇಳಿ ಬರುತ್ತಿದ್ದವು. ಕೆಲವು ರಾಕ್ಷಸರು ಜಪತಪಗಳನ್ನು ಮಾಡುತ್ತಿದ್ದರು. ಹಲವರು ಯುದ್ಧಾಭ್ಯಾಸ ಮಾಡುತ್ತಿದ್ದರು. ಅವೆಲ್ಲವನ್ನೂ ನೋಡುತ್ತಾ ಹನುಮಂತನು ಅಂತಃಪುರದ ಬಳಿಗೆ ಬಂದನು.

ಅದು ಬೆಳದಿಂಗಳ ರಾತ್ರಿ. ಅರಮನೆಯಲ್ಲೆಲ್ಲಾ ಚೆನ್ನಾಗಿ ಬೆಳಕು ಚೆಲ್ಲಿತ್ತು. ಹನುಮಂತನು ಸೀತೆಗಾಗಿ ಅಂತಃಪುರವನ್ನೆಲ್ಲಾ ಹುಡುಕಾಡಿದ. ಅಂತಃಪುರದಲ್ಲಿ ರಾವಣನ ಹಲವಾರು ಪತ್ನಿಯರು ಇದ್ದರು. ಆದರೆ ಸೀತೆ ಮಾತ್ರ ಇರಲಿಲ್ಲ. ಅಂತಃಪುರದ ಆಚೆ ಈಚೆ ಇದ್ದ ಭವನಗಳಲ್ಲೂ ಹನುಮಂತನು ಓಡಾಡಿದ. ರಾವಣನ ತಮ್ಮಂದಿರ ಭವನಗಳನ್ನೂ ಅಧಿಕಾರಿಗಳ ಮನೆಗಳನ್ನೂ ಶೋಧಿಸಿದ. ಎಲ್ಲಿ ಹುಡುಕಿದರೂ ಸೀತೆ ಇಲ್ಲ. ಹಾಗೆಯೇ ಹುಡುಕುತ್ತ ಹುಡುಕುತ್ತ ಹನುಮಂತನು ರಾವಣನ ಅರಮನೆಯ ಸಮೀಪಕ್ಕೆ ಬಂದ. ಅರಮನೆಯು ನವಿಲುಗಳ ಕ್ರೀಡಾಸ್ಥಾನಗಳಿಂದಲೂ, ಧ್ವಜಗಳಿಂದಲೂ, ಕಂಗೊಳಿಸುತ್ತಿತ್ತು. ರತ್ನಗಳಿಂದಲೂ ವಜ್ರ ವೈಢೂರ್ಯಗಳಿಂದಲೂ ಅಂದವಾಗಿ ಅಲಂಕೃತವಾಗಿತ್ತು. ಅಲ್ಲಿದ್ದ ಎಲ್ಲ ವಸ್ತುಗಳೂ ಚಿನ್ನದಿಂದ ಮಾಡಲ್ಪಟ್ಟಿದ್ದವು. ಕುಬೇರನ ಅರಮನೆಯಂತೆ ಇತ್ತು ಅದು. ಹನುಮಂತನು ಅರಮನೆಯ ಒಳಗೆ ಪ್ರವೇಶಿಸಿದನು. ವಿವಿಧ ಅಸ್ತ್ರಗಳಿಂದ ಕೂಡಿದ್ದ ಕೋಣೆಗಳನ್ನೂ, ಆಭರಣಗಳ ಖಜಾನೆಗಳನ್ನು ನೋಡುತ್ತ ನೋಡುತ್ತ ಹನುಮಂತನು ಪುಷ್ಪಕ ವಿಮಾನದ ಬಳಿಗೆ ಬಂದನು. ಪುಷ್ಪಕ ವಿಮಾನವೂ ರತ್ನಗಳಿಂದಲೂ, ಹೂಗಳಿಂದಲೂ ಅಲಂಕೃತವಾಗಿತ್ತು. ವಜ್ರ, ವೈಢೂರ್ಯ, ಹವಳಗಳನ್ನು ಉಪಯೋಗಿಸಿ ಹಕ್ಕಿಗಳನ್ನೂ ಸರ್ಪಗಳನ್ನೂ ವಿಮಾನದಲ್ಲಿ ಕೆತ್ತಿದ್ದರು. ಹನುಮಂತನು ಆ ವಿಮಾನವನ್ನು ಕಂಡು ಆಶ್ಚರ್ಯಭರಿತನಾದನು. ಹಾಗೆಯೇ ಸೀತೆ ಗೋಚರವಾಗಲಿಲ್ಲವಲ್ಲ ಎಂದು ದುಃಖಿತನಾದನು. ಅತ್ತ ಇತ್ತ ದೃಷ್ಟಿ ಹಾಯಿಸುತ್ತಿದ್ದಾಗ ದೂರದಲ್ಲಿ ಅಶೋಕ ವೃಕ್ಷಗಳ ಸಾಲು ಕಂಡು ಬಂದಿತು. ಸೀತೆಯು ಅಲ್ಲಿ ಬಂದಿಯಾಗಿರಬಹುದು ಎಂದುಕೊಂಡು ಹನುಮಂತನು ಅಶೋಕವನದ ಕಡೆ ಹೊರಟನು.

ಅಶೋಕ ವೃಕ್ಷಗಳೇ ಅಲ್ಲದೆ ಆ ವನದಲ್ಲಿ ಇನ್ನೂ ಅನೇಕ ರೀತಿಯ ಮರಗಿಡಗಳಿದ್ದವು. ಅಲ್ಲಿ ಸುಗಂಧವಾದ ಗಾಳಿ ಬೀಸುತ್ತಿತ್ತು. ಕೋಗಿಲೆಗಳು ಇಂಪಾಗಿ ಹಾಡುತ್ತಿದ್ದವು. ನವಿಲುಗಳು ನಾಟ್ಯವಾಡುತ್ತಿದ್ದವು. ಹನುಮಂತನು ಈ ಸೌಂದರ್ಯವನ್ನು ಸವಿಯುತ್ತಾ ಮುಂದೆ ನಡೆದ. ಹಾಗೆಯೇ ಹೋಗುತ್ತ ಹೋಗುತ್ತ ಅಶೋಕ ವೃಕ್ಷವೊಂದರ ಕೆಳಗೆ ಒಬ್ಬ ಸುಂದರ ಸ್ತ್ರೀಯನ್ನು ನೋಡಿದನು. ಆಕೆ ಮಲಿನವಾದ ಬಟ್ಟೆಯನ್ನು ಟ್ಟಿದ್ದಳು. ನಿರಾಭರಣಳಾಗಿದ್ದಳು. ದುಃಖದಿಂದ ಮುಖ ಬಾಡಿತ್ತು. ಅತ್ತು ಅತ್ತು ಅವಳ ಕಣ್ಣುಗಳು ಕೆಂಪಾಗಿದ್ದವು. ಈಕೆಯೇ ಶ್ರೀರಾಮನ ಪತ್ನಿ ಇರಬೇಕು ಎಂದು ಹನುಮಂತನು ನಿಶ್ಚಯಿಸಿದನು. ಸೀತಾದೇವಿಯನ್ನು ಕಂಡೆನಲ್ಲಾ



ಎಂಬ ಆನಂದದಿಂದ ಕುಣಿದು ಕುಪ್ಪಳಿಸಿದನು. 'ಅಯ್ಯೋ ಸೀತಾದೇವಿ, ರಾಜ ಕುಮಾರಿಯಾದ ನೀನು ರಾಕ್ಷಸರ ಬಂಧನದಲ್ಲಿರಬೇಕಾಯಿತೇ' ಎಂದು ಮನಸ್ಸಿನಲ್ಲಿಯೇ ದುಃಖಿಸಿದನು. ಸೀತೆಯ ಸುತ್ತಲೂ ರಾಕ್ಷಸಿಯರಿದ್ದುದರಿಂದ ಹನುಮಂತನು ಸಮೀಪದಲ್ಲಿದ್ದ ಮರವೊಂದನ್ನು ಹತ್ತಿ ಕುಳಿತ. ಆ ರಾಕ್ಷಸಿಯರು 'ರಾವಣನನ್ನು ಮದುವೆಯಾಗು, ನೀನು ರಾಣಿಯಾಗುತ್ತಿಯೆ. ರಾವಣನನ್ನು ಮದುವೆಯಾಗದಿದ್ದರೆ ನಿನ್ನನ್ನು ಕೊಂದುಬಿಡುತ್ತೇವೆ' ಎಂದು ಸೀತಾದೇವಿಯನ್ನು ಪರಿಪರಿಯಾಗಿ ಪೀಡಿಸುತ್ತಿದ್ದರು. ಸೀತೆಯು ಅವರ ಕಾಟವನ್ನು ತಡೆಯಲಾರದೆ ಬಿಕ್ಕಿ ಬಿಕ್ಕಿ ಅಳುತ್ತಿದ್ದಳು 'ನೀವೆಷ್ಟೇ ತೊಂದರೆ ಕೊಟ್ಟರೂ, ನಾನು ರಾವಣನನ್ನು ಮದುವೆಯಾಗಲಾರೆ' ಎಂದು ಬಿಟ್ಟಳು. ಸೀತೆಯ ದೈನ್ಯಾವಸ್ಥೆಯನ್ನು ಕಂಡು ಹನುಮಂತನಿಗೆ ದುಃಖ ಉಕ್ಕಿಬಂತು. ಆದರೂ ತಡೆದುಕೊಂಡನು. ಸ್ವಲ್ಪ ಸಮಯದ ನಂತರ ರಾಕ್ಷಸಿಯರೆಲ್ಲಾ ಮಲಗಿ ನಿದ್ದೆ ಹೋದರು. ಇದೇ ಸರಿಯಾದ ಸಮಯವೆಂದು ಹನುಮಂತನು ಶ್ರೀರಾಮನ ಕಥೆಯನ್ನು ಸುಶ್ರಾವ್ಯವಾಗಿ ಹಾಡಲಾರಂಭಿಸಿದನು. 'ದಶರಥನ ಯಾಗ–ಶ್ರೀರಾಮ ಜನನ–ಸೀತಾಕಲ್ಯಾಣ–ಅರಣ್ಯವಾಸ ಸೀತಾಪಹರಣ–ಶ್ರೀರಾಮನು ಸುಗ್ರೀವನನ್ನು ಭೇಟಿಯಾದುದು–ತಾನು ಸೀತೆಯನ್ನು ಹುಡುಕಿಕೊಂಡು ಲಂಕೆಗೆ ಬಂದಿರುವುದು' ಎಲ್ಲವನ್ನೂ ಇಂಪಾಗಿ ಹಾಡಿದನು. ಸುಂದರವಾದ ಗಾನವನ್ನು ಕೇಳಿ ಸೀತೆ ಆಶ್ಚರ್ಯಗೊಂಡಳು. ಅದೂ ತನ್ನ ಪತಿ

"ಎಳೆಯರ ರಾಮಾಯಣ"ದಿಂದ

**ಶ್ರೀ ವೈ. ನ. ನಾಗರಾಜ**

ದೇವ ಶ್ರೀರಾಮಚಂದ್ರನ ಕಥೆ. ಆನಂದದಿಂದ ಅವಳ ಮೈ ಪುಳಕಿತವಾಯಿತು. ಅವಳು ತಲೆಯೆತ್ತಿ ನೋಡಿದಳು. ಆದರೆ ಅವಳ ಕಣ್ಣಿಗೆ ಕಂಡಿದ್ದು ಒಂದು ದೊಡ್ಡ ಕಪಿ. ಸೀತೆ ಭಯಗೊಂಡಳು. 'ಅಯ್ಯೋ, ಯಾವುದೋ ರಾಕ್ಷಸನು ನನ್ನನ್ನು ಮೋಸಗೊಳಿಸಲು ಈ ವೇಷದಲ್ಲಿ ಬಂದಿದ್ದಾನೆ. ದೇವತೆಗಳೇ ನನ್ನನ್ನು ರಕ್ಷಿಸಿ, ಎಂದು ಪ್ರಾರ್ಥಿಸಿದಳು ಹನುಮಂತನಿಗೂ ಅವಳು ಭಯಗೊಂಡಿರುವುದು ತಿಳಿಯಿತು. ಅವನು ಮರದಿಂದ ಕೆಳಗಿಳಿದನು. ಕೈಮುಗಿದುಕೊಂಡು ವಿನಯದಿಂದ 'ಅಮ್ಮಾ, ನೀನು ಯಾರು? ನಿನ್ನನ್ನು ನೋಡಿದರೆ ನಮ್ಮ ಪ್ರಭು ಶ್ರೀರಾಮಚಂದ್ರನ ಪತ್ನಿಯಂತೆ ತೋರುತ್ತಿದೆ. ನೀನು ಸೀತಾದೇವಿಯೇ?' ಎಂದು ಕೇಳಿದನು. ಅವನ ವಿನಯವನ್ನು ಕಂಡು ಸೀತೆಯ ಭಯ ಹೋಯಿತು. ಅವಳು 'ಹೌದು, ನಾನು ಸೀತೆ' ಎಂದಳು. ಆಗ ಹನುಮಂತನು 'ತಾಯಿ, ನನ್ನನ್ನು ಶ್ರೀರಾಮನು ಇಲ್ಲಿಗೆ ಕಳುಹಿಸಿದ್ದಾನೆ. ಇನ್ನು ನಿಮ್ಮ ಕಷ್ಟದ ದಿನಗಳು ಕಳೆದುಹೋದುವೆಂದು ತಿಳಿಯಿರಿ. ಶ್ರೀರಾಮನು ಸೈನ್ಯಸಮೇತ ಇಲ್ಲಿಗೆ ಬಂದು ರಾವಣನನ್ನು ಕೊಲ್ಲುತ್ತಾನೆ. ನಿಮ್ಮನ್ನು ಬಂಧನದಿಂದ ಬಿಡಿಸಿ ಅಯೋಧ್ಯೆಗೆ ಕರೆದುಕೊಂಡು ಹೋಗುತ್ತಾನೆ. ಈ ಮಾತು ಖಂಡಿತ' ಎಂದನು; ನಂತರ ಶ್ರೀರಾಮನು ಗುರುತಿಗೆಂದು ಕೊಟ್ಟಿದ್ದ ಉಂಗುರವನ್ನು ಸೀತೆಗೆ ಕೊಟ್ಟನು. ಸೀತೆಯು ಅದನ್ನು ನೋಡಿ ಆನಂದಿತಳಾದಳು. ಪತಿಯ ನೆನಪು ಬಂದು ವಿರಹದ ದುಃಖವೂ ಆಯಿತು. ಆದರೂ ಸಮಾಧಾನ ತಂದುಕೊಂಡಳು. ನಂತರ ಹನುಮಂತನನ್ನು ವಿಚಾರಿಸಿ ಶ್ರೀರಾಮ ಲಕ್ಷ್ಮಣರ ಯೋಗಕ್ಷೇಮವನ್ನೂ ಇತರ ವಿಚಾರಗಳನ್ನೂ ತಿಳಿದುಕೊಂಡಳು. ಹನುಮಂತನು ಅಮ್ಮಾ, ನಾನು ಸಮುದ್ರವನ್ನು ಹಾರಿ ಲಂಕೆಗೆ ಬಂದೆ. ನಾನು ಎಷ್ಟು ದೊಡ್ಡದಾಗಿ ಬೇಕಾದರೂ ಬೆಳೆಯಬಲ್ಲೆ. ನೀವು ನನ್ನೊಡನೆ ಬನ್ನಿ. ನನ್ನ ಭುಜದ ಮೇಲೆ ಕುಳಿತುಕೊಳ್ಳಿ. ಒಂದೇ ನೆಗೆತಕ್ಕೆ ಹಾರಿ ಲಂಕೆಯ ಆಚೆ ನಿಮ್ಮನ್ನು ದಾಟಿಸುತ್ತೇನೆ. ನಿಮ್ಮ ಅಗಲಿಕೆಯಿಂದ ದುಃಖಿತರಾಗಿರುವ ಶ್ರೀರಾಮ ಲಕ್ಷ್ಮಣರ ಬಳಿಗೆ ನಿಮ್ಮನ್ನು ಬಿಡುತ್ತೇನೆ' ಎಂದನು. ಸೀತಾದೇವಿಯು, 'ಹನುಮಂತ, ನಿನ್ನ ಮಾತಿನಿಂದ ನನಗೆ ಸಂತೋಷವಾಗಿದೆ. ಆದರೆ ನನ್ನ ಪತಿಯೇ ನನ್ನನ್ನು ಈ ಸೆರೆಯಿಂದ ಬಿಡಿಸಬೇಕು. ಶ್ರೀರಾಮನು ಸೈನ್ಯ ಸಮೇತ ಇಲ್ಲಿಗೆ ಬಂದು ರಾವಣನ್ನು ಕೊಲ್ಲಬೇಕು. ಅನಂತರವೇ ನಾನು ಬಂಧನದಿಂದ ಬಿಡುಗಡೆ ಹೊಂದುವೆ. ಆದ್ದರಿಂದ ನಾನು ನಿನ್ನೊಡನೆ ಬರಲಾರೆ. ಹಾಗೆ ಬರುವುದು ಸರಿಯೂ ಅಲ್ಲ' ಎಂದಳು. ಹನುಮಂತನು 'ಹೌದು, ನೀವು ಹೇಳುವ ಮಾತು ಸರಿ. ಶ್ರೀರಾಮನು ಇಲ್ಲಿಗೆ ಬೇಗ ಬರುವಂತೆ ಹೇಳುತ್ತೇನೆ. ನಿಮ್ಮ ನೆನಪಿಗಾಗಿ ಶ್ರೀರಾಮಚಂದ್ರನಿಗೆ ತೋರಿಸಲು ಒಂದು ಗುರುತನ್ನು ಕೊಡಿ' ಎಂದನು. ಸೀತಾದೇವಿಯು ತನ್ನ ಸೆರಗಿನಲ್ಲಿದ್ದ ಚೂಡಾಮಣಿಯನ್ನು ತೆಗೆದು ಕೊಟ್ಟಳು. ಹನುಮಂತನು ಅದನ್ನು ಭಕ್ತಿಯಿಂದ ತೆಗೆದುಕೊಂಡು ಕಣ್ಣಿಗೊತ್ತಿಕೊಂಡು ತನ್ನ ಶಿರದಲ್ಲಿ ಧರಿಸಿದನು ನಂತರ ಸೀತಾದೇವಿಗೆ ಪ್ರದಕ್ಷಿಣೆ ಹಾಕಿ ನಮಸ್ಕರಿಸಿದನು. ಸೀತೆಯು 'ವಾನರ ಶ್ರೇಷ್ಠ, ಶ್ರೀರಾಮಚಂದ್ರನಿಗೆ ನನ್ನ ಪ್ರಣಾಮಗಳನ್ನು ತಿಳಿಸು ಲಕ್ಷ್ಮಣನಿಗೆ ನನ್ನ ಆಶೀರ್ವಾದಗಳನ್ನು ಹೇಳು. ನಾನು ಇಲ್ಲಿ ಇನ್ನೊಂದು ತಿಂಗಳು ಮಾತ್ರ ಕಾಯುತ್ತೇನೆ ಅಷ್ಟರೊಳಗೆ ಶ್ರೀರಾಮಚಂದ್ರನು ಬಂದು ನನ್ನನ್ನು ಬಿಡಿಸಿಕೊಳ್ಳಲಿ. ಇಲ್ಲದಿದ್ದರೆ ಈ ರಾವಣಾಸುರನ ಕಾಟ ತಡೆಯಲಾರದೆ ಬೆಂಕಿಗೆ ಹಾರುತ್ತೇನೆ. ನನ್ನ ಪಾತಿವ್ರತ್ಯವನ್ನು ರಕ್ಷಿಸಿಕೊಳ್ಳುತ್ತೇನೆ' ಎಂದಳು. ಹನುಮಂತನ 'ತಾಯಿ, ನೀವು ಚಿಂತಿಸಬೇಡಿ. ನಿಮ್ಮ ಸಂದೇಶ ತಲುಪಿದ ಕೂಡಲೇ ಶ್ರೀರಾಮನು ಸೈನ್ಯ ಸಮೇತವಾಗಿ ಇಲ್ಲಿಗೆ ಬರುತ್ತಾನೆ. ಲಂಕೆಯನ್ನು ಧ್ವಂಸಗೊಳಿಸುತ್ತಾನೆ. ರಾವಣನ ಸೈನಿಕರನ್ನು ಸದೆಬಡಿಯುತ್ತಾನೆ. ರಾವಣನನ್ನು ಯಮಪುರಿಗೆ ಅಟ್ಟಿ, ನಿಮ್ಮನ್ನು ಈ ಸೆರೆಯಿಂದ ಬಿಡಿಸುತ್ತಾನೆ. ಇದರಲ್ಲಿ ಸಂಶಯವೇ ಇಲ್ಲ' ಎಂದು ಹೇಳಿ ಮತ್ತೊಮ್ಮೆ ಸೀತಾದೇವಿಗೆ ನಮಸ್ಕರಿಸಿ ಹೊರಟನು.

ಅನಂತರ ಹನುಮಂತನಿಗೆ ಒಂದು ಯೋಚನೆ ಹೊಳೆಯಿತು. 'ಈ ರಾವಣನ ಸೈನ್ಯ ಎಷ್ಟಿದೆ, ಅದರ ಪರಾಕ್ರಮವೇನು, ಕೋಟೆಗಳ ಭದ್ರತೆ ಎಷ್ಟರಮಟ್ಟಿಗಿದೆ?' ಎಂದು ತಿಳಿಯಬೇಕು ಎಂದುಕೊಂಡ. ಅಶೋಕವನ ರಾವಣನಿಗೆ ಬಹಳ ಪ್ರಿಯವಾದ ತೋಟ. ಅದನ್ನು ಧ್ವಂಸ ಮಾಡಿದರೆ ರಾವಣನು ತನ್ನ ಸೈನ್ಯವನ್ನು ಇಲ್ಲಿಗೆ ಕಳುಹಿಸುತ್ತಾನೆ. ಆಗ ಸೈನ್ಯದ ಪರಾಕ್ರಮ ಗೊತ್ತಾಗುತ್ತದೆ ಎಂದು ಯೋಚಿಸಿದ.

ಕೂಡಲೇ ಅಶೋಕವನದಲ್ಲಿದ್ದ ದೊಡ್ಡ ಮರಗಳನ್ನೂ ಕೊಂಬೆಗಳನ್ನೂ ಲಟಲಟನೆ ಮುರಿದು ಬಿಸಾಕಿದ. ಒಂದು ಮರವನ್ನು ಮತ್ತೊಂದು ಮರಕ್ಕೆ ಉಜ್ಜಿ ಬೆಂಕಿ ಬರುವಂತೆ ಮಾಡಿದ. ಮರದಿಂದ ಮರಕ್ಕೆ ಹಾರುತ್ತ ಅರ್ಭಟಿಸುತ್ತ ಅಸಾಧ್ಯವಾದ ಗಲಾಟೆ ಮಾಡಿದ. ನಿಶ್ಯಬ್ದವಾಗಿದ್ದ ವನ ಒಮ್ಮೆಲೇ ಕೋಲಾಹಲದಿಂದ ತುಂಬಿಹೋಯಿತು. ರಾಕ್ಷಸರು ನಿದ್ದೆಯಿಂದೆದ್ದರು. ಹೆದರಿಕೆಯಿಂದ ಕೂಗಿ ಕೊಂಡರು. ರಕ್ಷಣೆಗಾಗಿ ರಾವಣನ ಅರಮನೆಗೆ ಓಡಿಹೋದರು. ರಾವಣನ ಬಳಿಗೆ ಹೋಗಿ 'ಪ್ರಭು, ಅಶೋಕವನಕ್ಕೆ ದೊಡ್ಡ ಕಪಿಯೊಂದು ನುಗ್ಗಿದೆ. ಅದು ಬಹಳ ಹಾವಳಿ ಮಾಡುತ್ತಿದೆ. ಸೀತೆ ಇರುವ ಭಾಗವನ್ನು ಬಿಟ್ಟು ಇನ್ನೆಲ್ಲವನ್ನೂ ಮುರಿದು ಹಾಳು ಮಾಡಿಬಿಟ್ಟಿದೆ' ಎಂದರು. ತನ್ನ ಪ್ರೀತಿಪಾತ್ರವಾದ ಅಶೋಕವನದಲ್ಲಿ ಕಪಿಯೊಂದು ಥಾಂದಲೆ ಮಾಡುತ್ತಿರುವ ಸುದ್ದಿ ಕೇಳಿ ರಾವಣನು ಕೋಪಗೊಂಡ. ತನ್ನ ದೊಡ್ಡದೊಂದು ಸೈನ್ಯವನ್ನು ಅಶೋಕವನದ ರಕ್ಷಣೆಗೆಂದು ಕಳುಹಿಸಿದ.

ಇತ್ತ ಹನುಮಂತನು ಕೋಟೆಯ ಹೆಬ್ಬಾಗಿಲಿನ ದೊಡ್ಡ ಚಿಲಕವನ್ನು ಕಳಚಿಕೊಂಡ. ಅದನ್ನು ಗಿರ್ರೆಂದು ತಿರುಗಿಸುತ್ತ ಆ ಸೈನಿಕರ ಮೇಲೆ ಹಾರಿದ. ಸೈನಿಕರು ಗಾಬರಿಯಿಂದ ಚೆಲ್ಲಾಪಿಲ್ಲಿಯಾದರು ಆ ಚಿಲಕವು ನೂರಾರು ಜನರ ಮುಖಕ್ಕೆ ಅಪ್ಪಳಿಸಿ ಅವರನ್ನು ಸಾಯಿಸಿತು.

ರಾವಣನಿಗೆ ಸುದ್ದಿಹೋಯಿತು. ಅವನ ಕೋಪ ಇನ್ನಷ್ಟು ಹೆಚ್ಚಿತು. ಅವನು ತನ್ನ ಸೇನಾಪತಿಯ ಮಗನನ್ನು ದೊಡ್ಡ ಸೇನೆಯೊಂದಿಗೆ ಹನುಮಂತನ ಮೇಲೆ ಯುದ್ಧಕ್ಕೆ ಕಳುಹಿಸಿದನು. ಹನುಮಂತನು ಅಲ್ಪ ಕಾಲದಲ್ಲೇ ಆ ಸೈನ್ಯವನ್ನೂ ಧ್ವಂಸಗೊಳಿಸಿಬಿಟ್ಟನು. ಅನಂತರ ಮಂತ್ರಿಯ ಮಗನೊಡನೆ ಬಂದ ಇನ್ನೊಂದು ಸೇನೆಗೂ ಅದೇ ಗತಿಯಾಯಿತು. ರಾವಣನು ತನ್ನ ಮಗ ಅಕ್ಷಕುಮಾರನನ್ನು ಕಳುಹಿಸಿದನು. ಅಕ್ಷಕುಮಾರನು ಶೌರ್ಯದಿಂದ ಕಾದಾಡಿದರೂ ಹನುಮಂತನ ಮುಂದೆ ಅವನ ಆಟ ನಡೆಯಲಿಲ್ಲ. ಅಕ್ಷಕುಮಾರ ಸತ್ತುಬಿದ್ದ.

ಮಗ ಸತ್ತ ವಿಷಯ ಕೇಳಿ ರಾವಣನಿಗೆ ಬಹಳ ದುಃಖವಾಯಿತು. ಅವನು ತನ್ನ ಇನ್ನೊಬ್ಬ ಅತ್ಯಂತಪರಾಕ್ರಮಿ ಪುತ್ರ ಇಂದ್ರಜಿತ್ತನನ್ನು ಯುದ್ಧಕ್ಕೆ ಕಳುಹಿಸಿದ. ಇಂದ್ರಜಿತ್ತು ಮಹಾಶೂರ. ಅನೇಕ ವರ್ಷ ತಪಸ್ಸು ಮಾಡಿ ಹಲವಾರು ಶಸ್ತ್ರಗಳನ್ನು ಸಂಪಾದಿಸಿಕೊಂಡಿದ್ದ. ಅವನು ಹನುಮಂತನೊಡನೆ ಯುದ್ಧ ಮಾಡುತ್ತ ಬ್ರಹ್ಮಾಸ್ತ್ರವನ್ನು ಪ್ರಯೋಗಿಸಿದ. ಆ ಮಹಾಸ್ತ್ರವು ಹನುಮಂತನನ್ನು ಬಂಧಿಸಿತು. ಹನುಮಂತನನ್ನು ಕರೆದುಕೊಂಡು ಇಂದ್ರಜಿತ್ತು ಅರಮನೆಗೆ ಹೋದ.

ಅರಮನೆಯಲ್ಲಿ ಒಡ್ಡೋಲಗ. ರಾವಣನು ಸಿಂಹಾಸನದ ಮೇಲೆ ಕುಳಿತಿದ್ದ. ಸಭೆ ಆಸ್ಥಾನಿಕರಿಂದ ತುಂಬಿತ್ತು. ಕಪಿಯೊಂದು ನಡೆಸುತ್ತಿರುವ ಥಾಂದಲೆಯಿಂದ ಅವರೆಲ್ಲ ದುಗಡಗೊಂಡಿದ್ದರು.

ರಾವಣನಿಗೆ ಹತ್ತು ತಲೆಗಳು ಇಪ್ಪತ್ತು ಕೈಗಳೂ ಇದ್ದವು. ಭಯಂಕರವಾದ ದೇಹವನ್ನು

ಹೊಂದಿದ್ದ ಅವನು ಕೋಪದಿಂದ ಹನುಮಂತ ನನ್ನು ಕುರಿತು 'ನೀನು ಯಾರು ? ಇಲ್ಲಿಗೇಕೆ ಬಂದೆ ? ಅಶೋಕವನವನ್ನು ಏಕೆ ಹಾಳುಮಾ ಡಿದೆ?' ಎಂದು ಕೇಳಿದನು ಹನುಮಂತನು 'ನಾನು ಶ್ರೀರಾಮಚಂದ್ರನ ದೂತ. ಸೀತಾ ದೇವಿಯನ್ನು ಹುಡುಕಿಕೊಂಡು ಇಲ್ಲಿಗೆ ಬಂದೆ ನಿನ್ನ ಅಧರ್ಮ ಕಾರ್ಯವನ್ನು ನೋಡಲಾರದೆ ಅಶೋಕವನವನ್ನು ಧ್ವಂಸಗೊಳಿಸಿದೆ.'

'ರಾವಣಾಸುರ, ನೀನು ಘೋರವಾದ ತಪ್ಪು ಮಾಡಿರುವೆ. ಪರಸ್ತ್ರೀಯನ್ನು ಅಪಹರಿಸಿರುವೆ ಅದು ಮಹಾ ಪಾಪದ ಕೆಲಸ. ಶ್ರೀರಾಮ ಚಂದ್ರನ ಪರಾಕ್ರಮ ನಿನಗೆ ತಿಳಿಯದು. ಅವನು ಕೋಪಗೊಂಡರೆ, ಇಡೀ ಲಂಕೆಯೇ ಸುಟ್ಟು ಬೂದಿಯಾಗುತ್ತದೆ. ಈಗಲೂ ನಾನು ಹೇಳುವ ಮಾತನ್ನು ಕೇಳು. ಸೀತಾದೇವಿಯನ್ನು ಶ್ರೀ ರಾಮಚಂದ್ರನಿಗೆ ಒಪ್ಪಿಸಿಬಿಡು. ನೀನು ಮಾಡಿದ ಕೆಲಸ ತಪ್ಪಾಯಿತೆಂದು ಕ್ಷಮೆ ಬೇಡು. ಆ ಮಹಾತ್ಮನು ನಿನ್ನನ್ನು ಕ್ಷಮಿಸುತ್ತಾನೆ. ನೀನೂ ನಿನ್ನ ಲಂಕೆಯೂ ಉಳಿಯುತ್ತೀರಿ. ನೀನು ಧರ್ಮದಿಂದ ರಾಜ್ಯವಾಳು' ಎಂದನು. ರಾವ ಣನು ಕಣ್ಣುಗಳನ್ನು ಕೆಂಪಗೆ ಮಾಡಿಕೊಂಡು 'ಎಲವೋ ಕಪಿಯೇ, ನೀನು ನನಗೇ ಬುದ್ಧಿವಾದ ಹೇಳಲು ಬರುತ್ತೀಯಲ್ಲವೇ? ನಿನ್ನನ್ನು ಈಗಲೇ ಕೊಲ್ಲುತ್ತೇನೆ' ಎಂದು ಗರ್ಜಿ ಸಿದನು. ಆಗ ರಾವಣನ ತಮ್ಮ ವಿಭೀಷಣನು 'ಅಣ್ಣ, ಹನುಮಂತನು ಇಲ್ಲಿಗೆ ರಾಯಭಾರಿಯಾಗಿ ಬಂದಿದ್ದಾನೆ. ದೂತನನ್ನು ನಾವು ಅಗೌರವಿಸ ಬಾರದು. ಅವನಿಗೆ ತೊಂದರೆ ಕೊಡಕೂಡದು. ಅದೂ ಅಲ್ಲದೆ, ಹನುಮಂತನು ಹೇಳಿರುವುದರಲ್ಲಿ ತಪ್ಪೇನೂ ಇಲ್ಲವಲ್ಲ. ಅವನು ಹೇಳಿದುದೆಲ್ಲ ಅಕ್ಷರಶಃ ನಿಜ. ಅವನು ಹೇಳಿದಂತೆ ನಡೆಯು ವುದೇ ಸರಿ. ನೀನು ಹನುಮಂತನನ್ನು ಖಂಡಿತ ಕೊಲ್ಲಕೂಡದು' ಎಂದನು. ರಾವಣನು ಸ್ವಲ್ಪ ಯೋಚಿಸಿ, 'ನಾನು ಅವನನ್ನು ಕೊಲ್ಲವುದಿಲ್ಲ. ಆದರೆ ಅವನು ಅಶೋಕವನವನ್ನು ಸುಟ್ಟ ತಪ್ಪಿಗೆ ತಕ್ಕ ಶಾಸ್ತಿ ಮಾಡುತ್ತೇನೆ' ಎಂದು ಕೊಂಡು, 'ಹನುಮಂತನ ಬಾಲಕ್ಕೆ ಬಟ್ಟೆ ಕಟ್ಟಿರಿ' ಎಂದು ಆಜ್ಞಾಪಿಸಿದನು. ರಾವಣನು ಹಾಗೆ ಹೇಳಿದ ಕೂಡಲೇ ಸೇವಕರು ಹನುಮಂತನ ಬಾಲಕ್ಕೆ ಬಟ್ಟೆ ಕಟ್ಟಲು ಪ್ರಾರಂಭಿಸಿದರು. ಆದರೆ ಆಶ್ಚರ್ಯ! ಬಟ್ಟೆ ಕಟ್ಟುತ್ತ ಕಟ್ಟುತ್ತ ಹನುಮಂತನ ಬಾಲ ಬೆಳೆಯತೊಡಗಿತು, ಎಷ್ಟು ಬಟ್ಟೆ ತಂದರೂ ಸಾಲಲಿಲ್ಲ. ಇಡೀ ಲಂಕಾ ನಗರದಲ್ಲಿದ್ದ ಎಲ್ಲ ಮನೆಗಳಿಂದಲೂ ಬಟ್ಟೆಗಳನ್ನು ತಂದರು. ಉಹ್ಞೂಂ. ಸಾಕಾಗಲೇ ಇಲ್ಲ. ರಾವಣನು 'ಆ ಬಟ್ಟೆಗೆ ಬೆಂಕಿ ಹಚ್ಚಿರಿ' ಎಂದನು. ಹನುಮಂತನ ಬಾಲಕ್ಕೆ ಬೆಂಕಿ ಹಚ್ಚಿದರು.

ಹನುಮಂತನು ಕೂಡಲೇ ಅಲ್ಲಿಂದ ನೆಗೆದ. ಇಡೀ ಲಂಕಾಪಟ್ಟಣದಲ್ಲೆಲ್ಲಾ ಹಾರಾಡಿದ. ಬೆಂಕಿ ಯಿಂದ ಊರಿನ ಎಲ್ಲ ಭಾಗಗಳನ್ನೂ ಸುಟ್ಟು ಬಿಟ್ಟ. ರಾವಣನೂ, ಅವನ ಮಂತ್ರಿಗಳೂ, ಆಸ್ಥಾನಿಕರೂ ಏನಾಯಿತೆಂದು ತಿಳಿಯುವ ಮೊದಲೇ ಲಂಕಾನಗರ ಬೆಂಕಿಯಿಂದ ಧಗಧಗನೆ ಉರಿಯಲಾರಂಭಿಸಿತು.

ಬೆಂಕಿ ಹಚ್ಚುತ್ತಿದ್ದ ಹಾಗೇ, ಲಂಕೆಯಲ್ಲಿ ದಟ್ಟವಾದ ಹೊಗೆ ಮುತ್ತಿ ಕತ್ತಲಾಯಿತು. ಹೆಂಗ ಸರೂ ಮಕ್ಕಳೂ ಉಸಿರು ಕಟ್ಟಿ ಗಟ್ಟಿಯಾಗಿ ಅಳ ಲಾರಂಭಿಸಿದರು ಅನೇಕರು ಮನೆಗಳೊಡನೆ ತಾವೂ ಸುಟ್ಟುಹೋದರು. ಎಲ್ಲಿ ನೋಡಿದರೂ ಬೊಬ್ಬೆ, ಹಾಹಾಕಾರ. ಇಡೀ ಲಂಕಾನಗರವೇ ಬೆಂಕಿಯಿಂದ ಭಗಭಗನೆ ಉರಿಯುತ್ತಿದ್ದಾಗ ಹೊಗೆ ಆಕಾಶದವರೆಗೂ ಹಬ್ಬಿತ್ತು. ಅಗ್ನಿಯು ತನ್ನ ಕೆನ್ನಾಲಿಗೆಗಳನ್ನು ಹತ್ತುದಿಕ್ಕುಗಳಿಗೂ ಚಾಚಿ ಉರಿಯಲಾರಂಭಿಸಿತು. ಎತ್ತ ನೋಡಿ ದರೂ ಉರಿ. ಎಲ್ಲಿ ನೋಡಿದರೂ ಹೊಗೆ. ಜನ ತಳಮಳಗೊಂಡರು; ಚೀರಿದರು; ದಿಕ್ಕಾಪಾಲಾಗಿ ಓಡಿದರು. ಅಗ್ನಿಯ ನೆಳೆ ತಕ್ಕೆ ಸಿಕ್ಕಿ ಬೂದಿಯಾದರು. ಬಂಡಿ, ಮರ, ಮನೆ ಯಾವುದನ್ನೂ ಬಿಡದೆ ಅಗ್ನಿ ಎಲ್ಲ ವನ್ನೂ ಆವರಿಸಿತು ಹನುಮಂತನು ಸಮುದ್ರ ತೀರಕ್ಕೆ ಹೋಗಿ, ತನ್ನ ಬಾಲವನ್ನು ಸಮುದ್ರ ದಲ್ಲಿ ಅದ್ದಿದನು. ಬೆಂಕಿಯು ಆರಿದನಂತರ ಉದ್ದ ವಾಗಿದ್ದ ಬಾಲವನ್ನು ಚಿಕ್ಕದು ಮಾಡಿಕೊಂಡನು ಹಾಗೆಯೇ ಅವನಿಗೆ ಒಂದು ಆಲೋಚನೆಬಂತು. 'ಈ ಲಂಕಾದಹನದಲ್ಲಿ ಅಶೋಕವನವೂ ಸುಟ್ಟು ಹೋಯಿತೇ? ಹಾಗಾದರೆ ಸೀತೆಯ ಗತಿಯೇನು? ಎಂದು ಚಿಂತಿಸಿದ. ತನ್ನ ಕೃತ್ಯದಿಂದ ಹನು ಮಂತನಿಗೆ ಬಹಳ ದುಃಖವಾಯಿತು. 'ಇರಲಿ, ಅಶೋಕವನಕ್ಕೆ ಹೋಗಿ ನೋಡಿಕೊಂಡು



ಬರೋಣ' ಎಂದುಕೊಂಡ. ಅಷ್ಟು ಹೊತ್ತಿಗೆ ಪಕ್ಕದಲ್ಲಿದ್ದವರು 'ಅಹಾ, ಹನುಮಂತ ಅದೆಷ್ಟು ಕುಶಲಿ; ಇಡೀ ಲಂಕೆಗೆ ಬೆಂಕಿಹಚ್ಚಿದರೂ, ಅಶೋಕವನಕ್ಕೆ ಜ್ವಾಲೆ ಹಬ್ಬಿಲ್ಲವಲ್ಲ. ಸೀತಾದೇವಿಗೆ ಸ್ವಲ್ಪವೂ ತೊಂದರೆಯಾಗಿಲ್ಲವಲ್ಲ' ಎಂದು ಮಾತನಾಡಿಕೊಳ್ಳುತ್ತಿದ್ದುದು ಕೇಳಿಸಿತು. ಅದನ್ನು ಕೇಳಿ ಹನುಮಂತನಿಗೆ ಆನಂದವಾಯಿತು.

ಅನಂತರ ಹನುಮಂತನು ಅಶೋಕವನಕ್ಕೆ ಹಿಂತಿರುಗಿ ಬಂದ. ಸೀತಾದೇವಿಯನ್ನು ಮತ್ತೊಮ್ಮೆ ಕಂಡು ರಾವಣನ ಆಸ್ಥಾನದಲ್ಲಿ ನಡೆದ ಸಂಗತಿಯನ್ನು ತಿಳಿಸಿದ. ಲಂಕಾದಹನವನ್ನೂ ಹೇಳಿದ. ಸೀತಾದೇವಿಯ ಅಪ್ಪಣೆಯನ್ನು ಪಡೆದ, ಸಮುದ್ರತೀರಕ್ಕೆ ಹೋದ. ತನ್ನ ದೇಹವನ್ನು ಬೃಹದಾಕಾರವಾಗಿ ಬೆಳೆಸಿ ಸಮುದ್ರವನ್ನು ಲಂಘಿಸಿದ. ಉತ್ತರ ತೀರಕ್ಕೆ ಬಂದು ಸೇರಿದ. ತನಗಾಗಿ ತವಕದಿಂದ ಕಾಯುತ್ತಿದ್ದ ಜಾಂಬವಂತ ಮೊದಲಾದವರನ್ನು ಕೂಡಿಕೊಂಡ

ವಾನರನಾಯಕರು ಹನುಮಂತನನ್ನು ನೋಡಿ ಹಿಗ್ಗಿಹೋದರು. ಆನಂದದಿಂದ ಕುಣಿದು ಕುಪ್ಪಳಿಸಿದರು. ಹನುಮಂತನನ್ನು ಮುತ್ತಿಕೊಂಡುಬಿಟ್ಟರು. ಅನಂತರ 'ಹೇ, ವಾನರೋತ್ತಮ, ಲಂಕಾದೇಶಕ್ಕೆ ಹೋಗಿದ್ದೆಯಾ? ಸೀತಾದೇವಿ ಅಲ್ಲಿರುವಳೇ? ಅವಳನ್ನು ಇಲ್ಲಿಗೇಕೆ ಕರೆದುಕೊಂಡು ಬರಲಿಲ್ಲ? ನಿನ್ನ ಅನುಭವವನ್ನು ನಮಗೆ ಹೇಳು' ಎಂದು ಒಕ್ಕೊರಲಿನಿಂದ ಕೇಳಿದರು.

ಹನುಮಂತನಿಗೆ ತನ್ನ ಗೆಳೆಯರನ್ನು ಕಂಡು ಬಹಳ ಆನಂದವಾಗಿತ್ತು. ಅವನಿಗೂ ತನ್ನ ಅನುಭವವನ್ನು ಹೇಳಬೇಕೆಂಬ ತವಕ. ಆವನು ಸಮುದ್ರಲಂಘನ ಲಂಕಾದೇವತೆಯ ದರ್ಶನ–ರಾವಣನ ಅರಮನೆ–ಪುಷ್ಪಕ ವಿಮಾನ–ಅಶೋಕವನ–ಸೀತಾ ದರ್ಶನ – ಲಂಕಾದಹನ ಎಲ್ಲವನ್ನೂ ವಿವರವಾಗಿ ಹೇಳಿದನು. ಎಲ್ಲರೂ ಹನುಮಂತನ ಪರಾಕ್ರಮ ಪೂರಿತ ಅನುಭವವನ್ನು ಕೇಳಿದರು. ಅವರಿಗೆಲ್ಲ ಬಹಳ ಸಂತೋಷವಾಯಿತು. ತಮ್ಮ ಗೆಳೆಯ ಇಷ್ಟೊಂದು ಕೆಲಸ ಮಾಡಿದನಲ್ಲ ಎಂಬ ಆನಂದದಿಂದ ಉಬ್ಬಿಹೋದರು. ಎಲ್ಲರೂ ಕಿಷ್ಕಿಂಧೆಗೆ ಹೊರಟರು.

—

---

( 24ನೇ ಪುಟದಿಂದ)

ಏರ್ಪಡಿಸುವನು. ಅಗ್ನಿಮಧ್ಯದಿಂದ ಮೂಲ ಸೀತಾದೇವಿಯು ಎದ್ದು ಬಂದು ರಾಮನ ಪುನಸ್ಸಮಾಗಮನ್ನು ಪಡೆಯುವಳು. ಎಲ್ಲರೊಡನೆ ರಾಮನು ಪುಷ್ಪಕದಲ್ಲಿ ಅಯೋಧ್ಯೆಗೆ ಪ್ರತ್ಯಾಗಮನ ಮಾಡುವನು. ಸೀತೆಯು ಅಗ್ನಿಯಿಂದ ಹೊರಗೆ ಬಂದಾಗ ಬ್ರಹ್ಮಾದಿಗಳು ರಾಮನನ್ನು ಮುಕ್ತಕಂಠದಿಂದ ಸ್ತೋತ್ರಮಾಡಿ ಅವನ ಸರ್ವಶಕ್ತಿತ್ವವನ್ನು ಕೊಂಡಾಡುವರು. ದಾರಿಯಲ್ಲಿ ಭರದ್ವಾಜರು ರಾಮನು ನಡೆಸಿದ ಕಾರ್ಯಗಳಿಗಾಗಿ ವಂದನೆಯನ್ನರ್ಪಿಸುವರು. ರಾಮ ರಾಜ್ಯಾಭಿಷೇಕವು ಅತ್ಯಂತ ವೈಭವದಿಂದ ನಡೆಯುವುದು. ದೇವತೆಗಳೆಲ್ಲ ಸ್ತೋತ್ರಮಾಡುವರು. ಗಂಧರ್ವಗಾನವಾಗುವುದು – ಸರ್ವ ವಾನರ ರಾಕ್ಷಸರಿಗೆ ಸಂಭಾವನೆಗಳನ್ನು ಕೊಟ್ಟು ಕಳುಹಿಸುವರು. ಫಲಶ್ರುತಿಯಿಂದ ಯುದ್ಧಕಾಂಡವು ಮುಗಿಯುವುದು.

ಉತ್ತರಕಾಂಡದಲ್ಲಿ ರಾಮನು ಧರ್ಮರಾಜ್ಯ ಸ್ಥಾಪನೆ ಮಾಡುವನು. ಋಷಿಗಳೂ ದೇವತೆಗಳೂ ರಾಮಾಯಣದ ಅನೇಕ ವ್ಯಕ್ತಿಗಳ ಜನ್ಮಚರಿತ್ರೆಯನ್ನೂ ವಿಶದಪಡಿಸುವರು. ರಾಮನು ಕೋಟ್ಯಾನು ಕೋಟಿ ಶಿವಲಿಂಗಗಳನ್ನು ಸ್ಥಾಪನೆ ಮಾಡಿ ಏಕ ಪತ್ನೀವ್ರತದಿಂದ ಹನ್ನೊಂದುಸಾವಿರ ವರ್ಷ ರಾಜ್ಯಭಾರಮಾಡುವನು. ಸೀತೆಯು ತಾವು ಪುನಃ ವೈಕುಂಠಕ್ಕೆ ಹೋಗಬೇಕಾದ ಅಂಶವನ್ನು ರಾಮನಿಗೆ ಜ್ಞಾಪಿಸುವಳು. ಲೋಕಾಪವಾದದ ನೆಪದಲ್ಲಿ ಅವಳನ್ನು ತ್ಯಜಿಸುವುದಾಗಿಯೂ ಅವಳಿಗೆ ಪುತ್ರದ್ವಯವು ವಾಲ್ಮೀಕಿಯ ಆಶ್ರಮದಲ್ಲಿಯೇ ತನ್ನಂಶದಿಂದ ಜನಿಸುವರೆಂದೂ ಲೋಕಪ್ರತ್ಯಯಾರ್ಥವಾಗಿ ಸೀತೆಯು ಭೂವಿವರವನ್ನು ಪ್ರವೇಶಿಸಿದನಂತರ ವೈಕುಂಠವನ್ನು ಸೇರಬೇಕೆಂದೂ ಮುಂದೆ ತಾನೂ ಅಲ್ಲಿಗೆ ಬಂದು ನೇರುವೆನೆಂದೂ ರಾಮನು ಸೀತೆಗೆ ತಿಳಿಸುವನು ಅಂತೆಯೇ ಸೀತಾಪರಿತ್ಯಾಗ, ಲವ–ಕುಶರ ಜನನ. ಲವಣಾಸುರವಧೆ, ರಾಮಾಯಣ ರಚನೆ, ಲವಕುಶ ಕೊಡನೆ ವಾಲ್ಮೀಕಿಗಳ ಆಗಮನ, ರಾಮನ ಯಜ್ಞಾಚರಣೆ, ರಾಮನಿಂದ ಕುಶನಿಗೆ ಪರಮಾರ್ಥೋಪದೇಶ, ಯಜ್ಞದಲ್ಲಿ ಲವಕುಶರ ರಾಮಾಯಣಗಾನ, ಸೀತಾದೇವಿಯ ಭೂಪ್ರವೇಶ, ಮೊದಲಾದುವು ಕ್ರಮವಾಗಿ ಜರುಗುವುವು. ಕೊನೆಯಲ್ಲಿ ಋಷಿಗಳಿಂದ ಅರವತ್ತು ಮೂರು ದೀರ್ಘವೃತ್ತಗಳಲ್ಲಿ ರಾಮ ಗೀತೆಯ ಪಠಣವಾಗುವುದು, ರಾಮನು ಕೌಸಲ್ಯೆಗೆ ಸಂಸಾರಾನಿತ್ಯತೆಯ ವಿಷಯವಾಗಿ ಉಪದೇಶಮಾಡುವನು. ಕೊನೆಯಲ್ಲಿ ಲಕ್ಷ್ಮಣಾದಿಯಾಗಿ ಸರ್ವರೂ ಸರಯೂನದಿಯಲ್ಲಿ ಪರಿನಿಷ್ಕ್ರಮಣ ಮಾಡುವರು.

ಈ ಕಥಾನುಸರಣೆಯಿಂದ ಅಧ್ಯಾತ್ಮ ರಾಮಾಯಣದ ದೃಷ್ಟಿಯಲ್ಲಿ ರಾಮಮಹಾತ್ಮ್ಯ ವರ್ಣನೆಯೇ ಪ್ರಧಾನವೆಂಬುದನ್ನು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ. ಉಳಿದ ವಿಷಯಗಳೆಲ್ಲ ಗೌಣ, ಆದಕ್ಕಾಗಿಯೇ ಈ ಗ್ರಂಥದಲ್ಲಿ ಬರುವ ವಿವಿಧರೀತಿಯ ರಾಮನ ಸ್ತೋತ್ರಗಳು ಒಟ್ಟು ಗ್ರಂಥದ ಅರ್ಧಕ್ಕಿಂತ ಹೆಚ್ಚಿನ ಭಾಗವನ್ನು ಆಕ್ರಮಿಸುತ್ತದೆ. ಕಥೆಗೆ ನೇರವಾಗಿ ಸಂಬಂಧಪಡದಿದ್ದರೂ ಅಧ್ಯಾತ್ಮ ವಿಷಯಗಳ ವಿಪುಲ ವರ್ಣನೆಯು ಮಧ್ಯೆ ಮಧ್ಯೆ ಉಕ್ತವಾಗಿವೆ. ಸ್ತೋತ್ರಭಾಗದ ಭಾಗವನ್ನು ಬಿಟ್ಟರೆ ಕಥಾಭಾಗವು ಅರ್ಧಕ್ಕಿಂತ ಕಡಿಮೆಯಾಗುತ್ತದೆ. ಆದರಿಂದ ಗ್ರಂಥಕ್ಕೆ ಯಾವ ಕುಂದೂ ಉಂಟಾಗುವುದಿಲ್ಲ. ಅದು ವಾಲ್ಮೀಕಿ ರಾಮಾಯಣದ ಉತ್ತಮ ಸಂಗ್ರಹವಾಗಬಹುದು. ಪಾತ್ರಗಳ ಬೆಳವಣಿಗೆಯ ದೃಷ್ಟಿಯಿಂದಲೂ ವೈಖರಿಯ ದೃಷ್ಟಿಯಿಂದಲೂ, ಇದಕ್ಕೆ ವಿಶೇಷಸ್ಥಾನವಿಲ್ಲ. ಇದರ ಶೈಲಿ ಸರಳವಾಗಿ ಓದಿ ಸುಗಮವಾಗಿದೆ. ಪದಪ್ರಯೋಗ ಲಲಿತವಾಗಿದೆ.

ಅಧ್ಯಾತ್ಮರಾಮಾಯಣದ ರಚನೆಯ ಕಾಲವನ್ನು ಗ್ರಂಥದಾಧಾರದಿಂದ ನಿಷ್ಕರ್ಷಿಸಲು ಸಾಧ್ಯವಿಲ್ಲ. ಮುಂದಿನ ಭಾರತೀಯ ಭಾಷಾ ರಾಮಾಯಣಗಳನೇಕ ಇದರ ಪ್ರಭಾವಕ್ಕೆ ಒಳಗಾಗಿದೆ. ತೆಲುಗು, ಕನ್ನಡ, ತಮಿಳು, ಮಲೆಯಾಳ, ಹಿಂದಿ ಮತ್ತು ಇತರ ಅನೇಕ ಔತ್ತರೇಯ ಭಾಷೆಗಳ ರಾಮಾಯಣಗಳು ಅಧ್ಯಾತ್ಮ ರಾಮಾಯಣದ ಕಥೆಯನ್ನು ಬಹುಮಟ್ಟಿಗೆ ಅನುಸರಿಸುತ್ತವೆ, ಭಾಷಾರಾಮಾಯಣಗಳಲ್ಲೆಲ್ಲ ಅತ್ಯಂತ ಪ್ರಾಚೀನವಾದ ಕಂಬ ರಾಮಾಯಣದಲ್ಲಿಯೂ ಇದರ ಪ್ರಭಾವವು ಕಂಡುಬಂದಿರುವುದರಿಂದ ಈ ರಾಮಾಯಣವು ಅದಕ್ಕಿಂತ ಹಿಂದೆ ಅಂದರೆ ಹತ್ತನೆಯ ಶತಮಾನಕ್ಕೆ ಹಿಂದೆ ರಚಿತವಾಗಿರಬೇಕು. ಎಷ್ಟು ಹಿಂದೆ ಎಂದು ಹೇಳುವುದು ಕಷ್ಟ. ಲಕ್ಷ್ಮಣನ ಶೇಷಾಂಶ, ಶರಣಾಗತಿ ಮಹತ್ವ, ಪಾದುಕಾತೀರ್ಥದ ಮಹಿಮೆ, ಮೊದಲಾದುವು ಇಲ್ಲಿ ಪ್ರಾಧಾನ್ಯವನ್ನು ಪಡೆದಿರುವುದರಿಂದ ವಿಶಿಷ್ಟಾದ್ವೈತ ತತ್ತ್ವವು ಇದರ ಮೇಲೆ ಪ್ರಭಾವ ಬೀರಿರಬೇಕು. ತ್ರಿಮೂರ್ತಿಗಳ ಐಕ್ಯಭಾವ, ಶಿವಲಿಂಗಗಳ ಪ್ರತಿಷ್ಠೆ, ಶಿವಕ್ಷೇತ್ರ ಮಹಿಮಾಕಥನ ಮೊದಲಾದವುಗಳಿರುವುದರಿಂದ ಭಾಗವತ ಸಂಪ್ರದಾಯದ ಪ್ರಭಾವವನ್ನು ಸೂಚಿಸುತ್ತದೆ.

ಪುರಾಣ ಗ್ರಂಥಗಳಲ್ಲಿ ಅಧ್ಯಾತ್ಮ ರಾಮಾಯಣವು ಯೋಗ್ಯಸ್ಥಾನವನ್ನು ಪಡೆಯಬಲ್ಲುದು. ಸಂಸ್ಕೃತ ಸರಳ ಕವಿತಾಗ್ರಂಥಗಳ ಮಧ್ಯೆ ಅದು ನಿಜವಾಗಿಯೂ ಗಣ್ಯಸ್ಥಾನಕ್ಕೆ ಯೋಗ್ಯವಾಗಿದೆ.

# ರಾಘವೇಂದ್ರರ ರಾಮಚರಿತೆ

ಮಂತ್ರಾಲಯ ರಾಘವೇಂದ್ರರ ಹಿರಿಮೆ ತಿಳಿಯದ ಆಸ್ತಿಕರಿಲ್ಲ. ವೈಷ್ಣವಧರ್ಮವನ್ನು ಭದ್ರ ತಳಹದಿಯ ಮೇಲೆ ಸ್ಥಾಪಿಸಿದ ಹಿಂದಿನ ಆಚಾರ್ಯರುಗಳ ಪರಂಪರೆಯನ್ನು ಭವ್ಯವಾಗಿ ಮುಂದುವರಿಸಿಕೊಂಡು ಬಂದವರು ಗುರು ರಾಘವೇಂದ್ರರು. ತಮ್ಮ ಆರಾಧ್ಯದೈವ ಶ್ರೀರಾಮಚಂದ್ರನ ಹೆಸರನ್ನೇ ಆಶ್ರಮನಾಮವನ್ನಾಗಿ ಪಡೆದ ವೇಂಕಟನಾಥಾಚಾರ್ಯರು ವಾಗ್ದೇವಿಯ ಪೂರ್ಣಾನುಗ್ರಹಕ್ಕೆ ಪಾತ್ರರಾಗಿದ್ದವರು; ಕ್ರಿ. ಶ. 1598 ರಿಂದ 1671 ರ ವರೆಗೆ ಈ ನೆಲದ ಮೇಲೆ ಭಕ್ತಿಯ ಪುಷ್ಪವೃಷ್ಟಿ ಕರೆದು ಭಗವಂತನ ಆರಾಧನೆಯಲ್ಲೇ ಕ್ಷಣಕ್ಷಣ ಕಳೆದವರು. ರಾಘವೇಂದ್ರರು 'ಪರಿಮಳಾಚಾರ್ಯ'ರಾಗಿದ್ದು ಜಯತೀರ್ಥರ ನ್ಯಾಯಸುಧೆಯ ಟಿಪ್ಪಣಿ ಬರೆದದ್ದರಿಂದ. ದ್ವೈತ ವೇದಾಂತದ ಚೆಂಗುಲಾಬಿಯ ಪರಿಮಳವನ್ನು ಇದರಿಂದ ಆಸಕ್ತರು ಆನಂದಿಸುವಂತಾಯಿತು.

ಶ್ರೀರಾಘವೇಂದ್ರರ ಕೃತಿಗಳೆಷ್ಟೋ ಸುಂದರ. ಸೂತ್ರ, ಉಪನಿಷತ್, ಗೀತೆಗಳ ಬಗ್ಗೆ ಅವರು ರಚಿಸಿದ ಉದ್ಗ್ರಂಥಗಳು ಪ್ರಕಾಂಡ ಪಂಡಿತರನ್ನೂ ಬೆರಗುಗೊಳಿಸುವಂತಹದು. ಆದರೂ ಅವರು ನಮ್ಮ ಪುಟ್ಟ ಮಕ್ಕಳಿಗೆ ರಾಮಾಯಣ, ಮಹಾಭಾರತ, ಶ್ರೀಮದ್ಭಾಗವತಗಳ ಹಿರಿಮೆ ತಿಳಿಸಿಕೊಡುವುದು, ಅವರಿಗೆ ಜ್ಞಾನದ ತಳಪಾಯವನ್ನು ಗಟ್ಟಿಮಾಡುವಂತಹುದು ಎಂಬುದನ್ನು ಅರಿತ ಸಹೃದಯಿ, ಎಂತಲೇ ಶ್ರೀಗಳು ಶ್ರೀರಾಮಚಾರಿತ್ರ್ಯಮಂಜರೀ ಹಾಗೂ ಶ್ರೀಕೃಷ್ಣಚಾರಿತ್ರ್ಯಮಂಜರೀ ಎಂಬ ಚಿಕ್ಕ ಕೃತಿಗಳನ್ನು ರಚಿಸಿದರು.

ಶ್ರೀರಾಮಚಾರಿತ್ರ್ಯಮಂಜರೀ ಒಂದು ಪುಟ್ಟ ಮಧುರ ಕಾವ್ಯ. ಕೇವಲ ಹನ್ನೊಂದು ಸ್ರಗ್ಧರಾವೃತ್ತದ ಪದ್ಯಗಳಲ್ಲಿ ರಾಮಾಯಣದ ಸೌಂದರ್ಯವನ್ನು ಸೆರೆಹಿಡಿದು, ಅಲ್ಲಿನ ಘಟನೆಗಳ ಗೂಢಾರ್ಥವನ್ನು ತಿಳಿಸುವ ಈ ಕೃತಿ ಬಾಲಕರಿಗೂ ಅರ್ಥವಾಗುವ ಶೈಲಿಯಲ್ಲಿ ರಚಿತವಾಗಿದೆ. ಬಾಲಬೋಧೆಯ ಇನ್ನೊಂದು ಉದ್ದಿಶ್ಯವಾದ ವ್ಯಾಕರಣ ಪ್ರಕ್ರಿಯೆಗಳ ಪರಿಚಯಿಸುವ ಉಪಯೋಗವೂ ಇಲ್ಲಿದೆ.

ಶ್ರೀಮಧ್ವಾಚಾರ್ಯರು ತಮ್ಮ "ಶ್ರೀಮನ್ಮಹಾಭಾರತತಾತ್ಪರ್ಯ ನಿರ್ಣಯ" ಗ್ರಂಥದಲ್ಲಿ ಪ್ರಾಸಂಗಿಕವಾಗಿ ವರ್ಣಿಸಿದ ರಾಮಕಥೆಯನ್ನು "ಮೂಲರಾಮಾಯಣ" ಎನ್ನುವ ವಾಡಿಕೆಯಿದೆ ಹನುಮಂತದೇವನ ಮೂರನೆಯ ಅವತಾರವಾದ ಶ್ರೀಮಧ್ವಾಚಾರ್ಯರು ಹೇಳಿದ ಈ ಕತೆಯೇ 'ಮೂಲರಾಮಾಯಣ' ಎನ್ನುವುದು ಆಚಾರ್ಯರ ಅನುಯಾಯಿಗಳ ನಂಬುಗೆ ಆದ್ದರಿಂದಲೇ ಶ್ರೀ ರಾಘವೇಂದ್ರತೀರ್ಥರೂ ತಮ್ಮ ಕೃತಿಯನ್ನು ಇದರ ಅವಲಂಬನದಲ್ಲೇ ರಚಿಸಿದ್ದಾರೆ ಈ ಕೃತಿಯಲ್ಲಿ ಸ್ರಗ್ಧರಾವೃತ್ತದ ಸೊಬಗು, ಸಂಗೀತ ಮಾಧುರ್ಯ, ಅರ್ಥಪೂರ್ಣ ಪದಜೋಡಣೆ ರಸಿಕರಿಗೆ ಕಾವ್ಯಸುಧೆಯನ್ನು ಉಣಬಡಿಸುತ್ತದೆ ಶ್ರೀರಾಮಚಾರಿತ್ರ್ಯ ಮಂಜರಿಗೆ ಲಕ್ಷ್ಮೀನಾರಾಣಾಚಾ

ಶ್ರೀ ಟಿ. ಎಸ್. ಪದ್ಮನಾಭರಾವ್

ರ್ಯರ ವ್ಯಾಖ್ಯಾನ ಸರಳವೂ ಅರ್ಥಗರ್ಭಿತವೂ ಆಗಿದೆ.

ಮೊದಲ ಪದ್ಯದಲ್ಲಿ ಶ್ರೀರಾಮಜನನದಿಂದ ಸೀತೆಯೊಡನೆ ಕಲ್ಯಾಣದವರೆಗಿನ ಕಥೆ ಅಡಕವಾಗಿದೆ

ಶ್ರೀಮಾನ್ ಪೂರ್ವಂ ಪ್ರಜಾತೋ ದಶರಥ
ನೃಪತೇಃ ರಾಮನಾಮಾಥ ನೀತೋ
ವಿಶ್ವಾಮಿತ್ರೇಣ ಮಂತ್ರಾಹ್ವದನುಜಸಹಿತ
ಸ್ತಾಟಿಕಾಂ ಘಾತಕೋಽಸ್ತ್ರಮ್ ।
ಬ್ರಹ್ಮಾದ್ಯಂ ಪ್ರಾಪ್ಯ ಹತ್ವಾ ನಿಶಿಚರನಿಕರಂ
ಯಜ್ಞಪಾಲೋ ವಿಮೋಚ್ಯಾ
ಹಲ್ಯಾಶಾಪಂ ಚ ಭಂಕ್ತ್ವಾ ಶಿವಧನು
ರುಪಯನ್ ಜಾನಕೀಂ ನಃ ಪ್ರಸೀದೇತ್ ॥

ಶ್ರೀನಿವಾಸನಾದ ಪರಮಾತ್ಮನೇ ದಶರಥರಾಜನಲ್ಲಿ ರಾಮನೆಂಬ ಹೆಸರು ಇರಿಸಿಕೊಂಡು ಜನಿಸಿ, ವಿಶ್ವಾಮಿತ್ರರಿಂದ ಮಂತ್ರಶಕ್ತಿಯನ್ನು ಸ್ವೀಕರಿಸಿದಮೇಲೆ ತಮ್ಮ ಲಕ್ಷ್ಮಣನೊಡಗೂಡಿ, ತಾಟಕೆಯನ್ನು ಕೊಂದು, ಬ್ರಹ್ಮಾಸ್ತ್ರವೇ ಮೊದಲಾದದ್ದನ್ನು ಗಳಿಸಿ ಯಜ್ಞವನ್ನು ರಕ್ಕಸರಿಂದ ರಕ್ಷಿಸಿ, ಅಹಲ್ಯೆಯ ಶಾಪವನ್ನು ಬಿಡಿಸಿ, ಜನಕನ ಸಭೆಯಲ್ಲಿ ಶಿವಧನುಸ್ಸನ್ನು ಮುರಿದು ಸೀತೆಯನ್ನು ವರಿಸಿದ ಶ್ರೀನಿಧಿ ನಮ್ಮನ್ನು ಕರುಣಿಸಲಿ, (ಈ ಪದ್ಯದ ಒಂದೊಂದು ಪದಸಮುಚ್ಚಯದಲ್ಲೂ ಒಂದೊಂದು ಮಹತ್ವಪೂರ್ಣ ಕಥಾಭಾಗ ವರ್ಣಿತವಾಗಿದೆ.)

ಆಯನ್ ರಾಮಸ್ಸಭಾರ್ಯೋಽಧ್ವನಿ ನಿಜಸ
ಹಜೈರ್ಭಾರ್ಗವೇಷ್ವಾಸರೋಪಾತ್ತದ್ಗಂ
ಹತ್ವಾ ಸುರಾರಿಂ ಪುರಗ ಉತ ನುತಸ್ತಾಪ
ಸೈರ್ಭೂಪಪುಷ್ಟೈಃ ।
ಕಲ್ಯಾಣಾನಂತ ಧರ್ಮೋಽಗುಣಲವರಹಿತಃ
ಪ್ರಾಣಿನಾಮಂತರಾತ್ಮೇ
ತ್ಯಾದ್ಯುಕ್ತಶ್ಚಾಭಿಷೇಕೇ ಪುರಜನ ಮಹಿತೋ
ಮಹ್ಯತಾಂ ಮೇ ವಚೋಭಿಃ ॥

ವಿವಾಹದನಂತರ, ತನ್ನ ಪತ್ನಿ ಸೀತೆ, ತಮ್ಮಂದಿರಾದ ಲಕ್ಷ್ಮಣ, ಭರತ, ಶತ್ರುಘ್ನರೊಡನೆ ಆಯೋಧ್ಯೆಗೆ ವಾಪಸಾಗುವ ದಾರಿಯಲ್ಲಿ ಎದುರಾದ ಪರಶುರಾಮನ ಬಿಲ್ಲಿನ ಹೆದೆಯೇರಿಸಿ, ಅಲ್ಲಿದ್ದ ತಪೋಮಯ ಎಂಬ ದೈತ್ಯನನ್ನು ಕೊಂದು, ಋಷಿಗಳಿಂದ ಸ್ತುತನಾಗಿ, ಅನಂತಕಲ್ಯಾಣಗುಣಪೂರ್ಣನೂ, ದೋಷರಹಿತನೂ ಆದ ಇವನೇ ರಾಜನಾಗಲು ಯೋಗ್ಯ ಎಂದು ದಶರಥನಿಗೆ ಋಷಿಗಳು ತಿಳಿಸಿದಾಗ ಆಯೋಧ್ಯೆಯಲ್ಲಿ ರಾರಾಜಿಸಿದ ಶ್ರೀರಾಮಚಂದ್ರ ನನ್ನ ಈ ಮಾತುಗಳಿಂದ ಪೂಜೆಗೊಳ್ಳಲಿ.

ಕೈಕೇಯೀಪ್ರೀತಿಹೇತೋಸ್ಸಸಹಜ ನೃಪಜೋ
ವಲ್ಕಲೀಯಾನರಣ್ಯಂ
ಗಂಗಾತಾರೀ ಗುಹಾರ್ಚ್ಯಃ ಕೃತರುಚಿರ
ಜಟೋ ಗೀಷ್ಪತೇಃ ಪುತ್ರಮಾನ್ಯಃ ।
ತೀರ್ತ್ವಾ ಕೃಷ್ಣಾಂ ಪ್ರಯಾತೋಽವತು ನಿಜ
ಮಮಲಂ ಚಿತ್ರಕೂಟಂ ಪ್ರಪನ್ನಂ
ಸ್ವಾಂಬಾಭಿ ಭ್ರಾತರಂ ತಂ ಶ್ರುತಜನಕಗತಿ
ಸ್ಸಾಂತ್ವಯನ್ ವ್ಯುಪ್ತತೀರ್ಥಃ ॥

ಕೈಕೇಯಿಯ ಮಾತಿಗೆ ಬೆಲೆಕೊಟ್ಟು ತನ್ನ ತಮ್ಮನೊಡನೆ ನಾರುಮಡಿ ಧರಿಸಿ ಅರಣ್ಯವೇರಿ, ಗಂಗೆ

ಯನ್ನು ದಾಟಿ, ಅಂಬಿಗನಾದ ಗುಹನಿಂದ ಪೂಜಿತನಾಗಿ, ಮನೋಹರವಾದ ಜಡೆಧರಿಸಿ, ಭರದ್ವಾಜ ಋಷಿಗಳಿಂದ ಸೇವಿತನಾಗಿ, ಕೃಷ್ಣಾ ನದಿಯನ್ನು ದಾಟಿ, ಚಿತ್ರಕೂಟದ ಕಡೆಗೆ ಹೊರಟಾಗ ತನ್ನ ತಾಯಿಯರೊಡನೆ ಅಲ್ಲಿಗೆ ತಲುಪಿದ ಭರತನಿಂದ ತಂದೆಯ ಸಾವಿನ ಬಗ್ಗೆ ತಿಳಿದು, ಅವನಿಗೆ ತರ್ಪಣ ನೀಡಿದ ಶ್ರೀರಾಮಚಂದ್ರ.

ದತ್ವಾಸ್ಮೈ ಪಾದುಕೇ ಸ್ವೇ ಕ್ಷಿತಿಭರಣಾಕೃತೌ
ಪ್ರೇಷ್ಯ ತಂ ಕಾಕನೇತ್ರಂ
ವ್ಯಸ್ಯಾರಾಧ್ಯೋಽತ್ರಿನಾಮ್ನಾ ವನಮಥ
ಸಮಿತೋ ದಂಡಕಂ ತಾಪಸೇಷ್ಟವ್ ।
ಕುರ್ವನ್ಹತ್ವಾ ವಿರಾಧಂ ಖಲಕುಲದಮನಂ
ಯಾಚಿತಸ್ತಾಪಸಾಗ್ರ್ಯೈಃ
ತೇಷಾಂ ದತ್ವಾಭಯಂ ಸ್ವಾನಸಿಧನು
ರಿಷುಧೀನ್ಯಾನಗಸ್ತ್ಯಾತ್ಸ ಪಾಯಾತ್ ॥

ಭರತನಿಗೆ ತನ್ನ ಪಾದುಕೆಗಳನ್ನು ಅನುಗ್ರಹಿಸಿ, ಅವನನ್ನು ರಾಜ್ಯವನ್ನು ಆಳುವುದಕ್ಕೆ ನಿಯಮಿಸಿ, ಕಾಕಾಸುರನನ್ನು ಕೊಂದು, ಅತ್ರಿ ಋಷಿಗಳಿಂದ ಪೂಜಿತನಾಗಿ ದಂಡಕಾರಣ್ಯವನ್ನು ಸೇರಿದ, ಅಲ್ಲಿ ವಿರಾಧನೇ ಮೊದಲಾದ ರಾಕ್ಷಸರನ್ನು ಕೊಂದು, ಋಷಿಗಳಿಂದ ಪ್ರಾರ್ಥಿತನಾಗಿ ಅವರಿಗೆ ಅಭಯ ನೀಡಿದ, ಅಗಸ್ತ್ಯರಿಂದ ಅಸ್ತ್ರಗಳನ್ನು ಪಡೆದ ಶ್ರೀರಾಮ ನಮ್ಮನ್ನು ಕಾಪಾಡಲಿ.

ಆಸೀನಃ ಪಂಚವಟ್ಯಾಮಕುರುತ ವಿಕೃತಾಂ
ರಾಕ್ಷಸೀಂ ಯೋ ದ್ವಿಸಪ್ತ
ಕ್ರವ್ಯಾದಾನಪ್ಯನೇಕಾನಥ ಖರಮವಧೀ
ದ್ದೂಷಣಂ ಚ ತ್ರಿಶೀರ್ಷವ್ ।
ಮಾರೀಚಂ ಮಾರ್ಗರೂಪಂ ದಶವದನ
ಹೃತಾಮಾಕೃತಿಂ ಭೂಮಿಜಾಯಾಃ
ಅನ್ವಿಷ್ಯನ್ನಾರ್ತಗೃಧ್ರಂ ಸ್ವಗತಿಮಥ ನಯ
ನ್ಸಾಮವೇತ್ ಘ್ನನ್ಕಬಂಧವ್ ॥

ಪಂಚವಟಿಯಲ್ಲಿರುವಾಗ, ಅಲ್ಲಿಗೆ ಬಂದ ಶೂರ್ಪನಖಿಯನ್ನು ವಿಕೃತಗೊಳಿಸಿ (ಕಿವಿಮೂಗುಗಳನ್ನು ಕೊಯಿದು) ಖರದೂಷಣ, ತ್ರಿಶಿರ ಮೊದಲಾದವರನ್ನು ಕೊಂದು, ಜಿಂಕೆಯಂತೆ ರೂಪತಳೆದ ಮಾರೀಚನನ್ನು ಕೊಂದು, ಈ ಮಧ್ಯೆ ರಾವಣನಿಂದ ಅಪಹೃತವಾದ ಸೀತಾಪತಿವ್ರತೆಯನ್ನು ಲೋಕದೋಹನಾರ್ಥವಾಗಿ ಹುಡುಕುತ್ತಾ, ಹೊರಟು, ದಾರಿಯಲ್ಲಿ ಸಿಕ್ಕು ವಿಷಯ ತಿಳಿಸಿದ ಜಟಾಯುವಿಗೆ ಸದ್ಗತಿ ನೀಡಿ, ಕಬಂಧಾಸುರನನ್ನು ಕೊಂದ ಶ್ರೀರಾಮ ನಮ್ಮನ್ನು ರಕ್ಷಿಸಲಿ, (ಇಲ್ಲಿ ಮೂಲರಾಮಾಯಣದಲ್ಲಿ ಹೇಳಿದಂತೆ ಕಥೆ ನಿರೂಪಿತವಾಗಿದೆ. ಸನ್ಯಾಸಿವೇಷದ ರಾವಣ ರಾಮಾಶ್ರಮದಿಂದ ಕದ್ದದ್ದು ಸೀತೆಯನ್ನಲ್ಲ; ಸೀತೆಯಂತೆ ತೋರುತ್ತಿದ್ದ ಅಗ್ನಿಲೋಕದ ವೇದವತಿಯನ್ನು, ರಾವಣನವಧೆಯವರೆಗೂ ನಿಜವಾದ ಸೀತೆ ಕೈಲಾಸದಲ್ಲಿ ಶಿವ–ಪಾರ್ವತಿಯಿಂದ ಪೂಜಿತಳಾಗಿದ್ದಳು ಎಂಬುದು ಈ ಕಥೆಯ ಸಾರ )

ಪಂಪಾತೀರಂ ಸಗಚ್ಛನ್ನಿಹ ಕೃತವಸತಿರ್ಭಕ್ತಿ
ತುಷ್ಟಃ ಶಬರ್ಯೈ
ದತ್ವಾ ಮುಕ್ತಿಂ ಪ್ರಕುರ್ವನ್ ಹನುಮತ
ಉದಿತಂ ಪ್ರಾಪ್ತ ಸುಗ್ರೀವಸಖ್ಯಂ ।
ಸಪ್ತಚ್ಛಿತ್ವಾಥ ತಾಲಾನ್ವಿಧಿವರಬಲಿನೋ
ವಾಲಿಭಿತ್ಸೂರ್ಯಸೂನುವ್
ಕುರ್ವಾಣೋ ರಾಜ್ಯಪಾಲಂ ಸಮವತು
ನಿವಸನ್ಮಾಲ್ಯವತ್ಕಂದರೇಸೌ ॥

ಪಂಪಾಸರೋವರದ ತೀರದಲ್ಲಿ ವಾಸಿಸುತ್ತಿದ್ದಾಗ ಶಬರಿಯ ಭಕ್ತಿಗೊಲಿದು, ಆಕೆಗೆ ಮುಕ್ತಿಯನ್ನು ನೀಡಿ, ಹನುಮಂತನಿಂದ ಎಲ್ಲ ವಿಷಯಗಳನ್ನು ತಿಳಿದು, ಸುಗ್ರೀವನ ಸ್ನೇಹಪಡೆದು, ಏಳುತಾಳೆಯ ಮರಗಳನ್ನು ಒಂದೇಬಾಣದಿಂದ ಉರುಳಿಸಿ, ಸೂರ್ಯಪುತ್ರನಾದ ಸುಗ್ರೀವನನ್ನು ಕಿಷ್ಕಿಂಧೆಗೆ ರಾಜನನ್ನಾಗಿ ಮಾಡಿ, ತಾನು ಮಾಲ್ಯವಂತ ಪರ್ವತದ ಗುಹೆಯಲ್ಲಿ ವಾಸಿಸಿದ ಶ್ರೀರಾಮನು ರಕ್ಷಿಸಲಿ. ಈ ಶ್ಲೋಕದಲ್ಲಿ ಪರಮಾತ್ಮನ ಪ್ರತಿಯೊಂದು ವ್ಯಾಪಾರವೂ ಭಕ್ತರ ಅನುಗ್ರಹಕ್ಕಾಗಿಯೇ ಎಂಬುದನ್ನು ಒತ್ತಿಹೇಳಿದ್ದಾರೆ. ಅಲ್ಪ ಭಕ್ತಿಯಿಂದಲೇ ಮಹತ್ತಾದ ಫಲವನ್ನು ನೀಡುವ ಭಗವಂತ ಕರುಣೆಯ ಕಡಲು ಎನ್ನುವುದು ಇಲ್ಲಿ ನೆನಪಿಗೆ ಬರುತ್ತದೆ.

ನೀತ್ವಾ ಮಾಸಾನ್ ಕಪೀಶಾನಿಹ ದಶಹರಿತಃ
ಪ್ರೇಷ್ಯಸೀತಾಂ ವಿಚಿತ್ಯಾ
ಯಾತಃ ಶ್ರೀಮದ್ಧನೂ ಮದ್ಗಿರಮಥ
ಸಮನುಶ್ರುತ್ಯ ಗಚ್ಛನ್ಮಹೇಂದ್ರೈಃ ।
ಸುಗ್ರೀವಾದ್ಯೈರಸಂಖ್ಯೈರ್ದಶಮುಖ
ಸಹಜಂ ಮಾನಯನ್ನಬ್ಧಿ ವಾಚಾ
ದೈತ್ಯಘ್ನಸ್ಸೇತು ಕಾರೀ ರಿಪುಪುರರುದವೇದ್ವಾ
ನರೈರ್ವ್ಯೈರಿ ಘಾತೀ ॥

ಮಾಲ್ಯವಂತ ಪರ್ವತದಲ್ಲಿ ಕೆಲತಿಂಗಳನ್ನು ಕಳೆದ ಮೇಲೆ, ಸೀತೆಯನ್ನು ಹುಡುಕುವುದಕ್ಕೋಸ್ಕರ ಹತ್ತು ದಿಕ್ಕುಗಳಿಗೂ ಕಪಿಗಳನ್ನು ಕಳುಹಿಸಿ, ಹನುಮಂತನ ಮಾತಿನಂತೆ ಕಪಿಸೈನ್ಯವನ್ನು ಮಹೇಂದ್ರ ಪರ್ವತದತ್ತ ಕಳುಹಿಸಿ, ರಾವಣನ ತಮ್ಮನಾದ ವಿಭೀಷಣನನ್ನು ಗೌರವಿಸಿ, ಸಮುದ್ರ ರಾಜನ ಮಾತಿಗೆ ಬೆಲೆಯಿತ್ತು, ಕಡಲಿಗೆ ಸೇತುವೆ ನಿರ್ಮಿಸಿ, ರಾವಣನ ಲಂಕೆಯನ್ನು ಆಕ್ರಮಿಸಿ ಶತ್ರುಗಳನ್ನು ಸದೆಬಡಿದ ಶ್ರೀರಾಮ ರಕ್ಷಿಸಲಿ.

ಭಗ್ನಂ ಕೃತ್ವಾದಶಾಸ್ಯಂ ಗುರುತರವಪುಷಂ
ಕುಂಭಕರ್ಣಂ ನಿಗೃಹ್ಯ
ಪ್ರಥ್ವ್ಯಸ್ತಶೇಷನಾಗಂ ಪದಕಮಲನತಂ
ತಾರ್ಕ್ಷ್ಯಮಾನಂದ್ಯ ರಾಮಃ ।
ಸರ್ವಾನುಜ್ಜೀವಯಂತಂ ಗಿರಿಧರಮನ
ಘಶ್ಚಾಂಜನೇಯಂ ಕಪೀನ್ತ್ವಾನ್
ವಿಜ್ಞಾನಾಸ್ತ್ರೇಣ ರಕ್ಷನ್ ಸಮವತು
ದಮಯಲ್ಲಕ್ಷ್ಮಣೌಚ್ಛಕ್ರಶತ್ರುವ್ ॥

ರಾವಣ ಕುಂಭಕರ್ಣರನ್ನು ಕೊಂದು, ದುಷ್ಟ ಸರ್ಪಗಳನ್ನು ಕೊಂದ ಗರುಡನನ್ನು ಮೆಚ್ಚಿ ಗೌರವಿಸಿ, ಎಲ್ಲ ಕಪಿಗಳನ್ನು ಬದುಕಿಸಿದ ಆಂಜನೇಯನನ್ನೂ ಅನುಗ್ರಹಿಸಿ, ಗಂಧಮಾದನ ಪರ್ವತ ತಂದದ್ದರಿಂದ ಉಳಿದ ಕಪಿಗಳನ್ನು ವಿಜ್ಞಾನಾಸ್ತ್ರದಿಂದ ರಕ್ಷಿಸಿ, ಲಕ್ಷ್ಮಣನಿಂದ ಇಂದ್ರಜಿತುವನ್ನು ಕೊಲ್ಲಿಸಿದ ಶ್ರೀರಾಮ ಕಾಪಾಡಲಿ.

ಕ್ರವ್ಯಾದಾನ್ಘ್ನನ್ನಸಂಖ್ಯಾನಪಿ ದಶವದನಂ
ಬ್ರಹ್ಮಪೂರ್ವೈಸ್ಸುರೇಶೈಃ
ಪುಷ್ಪೈರಾಕೀರ್ಯಮಾಣೋ ಹುತವಹ
ವಿಮಲಾ ಮಾಪ್ಯ ಸೀತಾಂ ವಿಧಾಯ ।
ರಕ್ಷೋನಾಥಂ ಸ್ವಭಕ್ತಂ ಸ್ವಪುರಮಥಗತಃ
ಪುಷ್ಪಕಸ್ಥಸ್ಸಮಸ್ತೈಃ
ಸಾಮ್ರಾಜ್ಯೇಚಾಭಿಷಿಕ್ತೋ ನಿಜಜನ
ಮಖಿಲಂ ಮಾನಯನ್ಮೇಗತಿಸ್ಸ್ಯಾತ್ ॥

ಅನೇಕ ರಾಕ್ಷಸರನ್ನು, ರಾವಣನನ್ನೂ ಕೊಂದು, ಬ್ರಹ್ಮಾದಿದೇವತೆಗಳು ಪುಷ್ಪವೃಷ್ಟಿ ಮಾಡುತ್ತಿರಲು ಅಗ್ನಿಯಿಂದ ಪರಿಶುದ್ಧಳಾದ ಸೀತೆಯನ್ನು ಸ್ವೀಕರಿಸಿ, ತನ್ನ ಭಕ್ತನಾದ ವಿಭೀಷಣನನ್ನು ಲಂಕೆಗೊಡೆಯನನ್ನಾಗಿಸಿ, ಪುಷ್ಪಕ ವಿಮಾನದಲ್ಲಿ ಕುಳಿತು ಅಯೋಧ್ಯೆಯಲ್ಲಿ ಸಾಮ್ರಾಜ್ಯಾಭಿಷೇಕ ಮಾಡಿಸಿ ಕೊಂಡ ಶ್ರೀರಾಮಚಂದ್ರನೇ ನನ್ನ ಗಮ್ಯಸ್ಥಾನವಾಗಲಿ. ಎಂದರೆ ಅವನೇ ವಂದ್ಯ, ಗಮ್ಯ ಎಂದರ್ಥ.

ರಕ್ಷನ್ಕ್ಷೋಣೀಂ ಸಮೃದ್ಧಾಂ ನುತ ಉತ
ಮುನಿಭಿರ್ಮಾನಯನ್ವಾಯುಸೂನುಂ
ಪ್ರೇಷ್ಯಾದಿತ್ಯಾತ್ಮಜಾದೀನ್ವ್ಯತನುತ ಭರತಂ
ಯೌವರಾಜ್ಯೇಽನುಮಾನ್ಯ ।
ಕಾರ್ಯೇ ಸೌಮಿತ್ರಮಾರ್ತಶ್ಚಗದಿತಕ್ಷದರಿ
ಘ್ನೋಽಥ ಶತ್ರುಘ್ನತೋ ಯೋ
ಹತ್ವಾಸೌ ದುಷ್ಟಶೂದ್ರಂ ದ್ವಿಜಸುತಗುಬವೇ
ತ್ಕುಂಭಜಾನ್ಮಾಲಭಾರೀ ॥

ಸಮೃದ್ಧಳಾದ ಭೂಮಿಯನ್ನು ಪಾಲಿಸುತ್ತಾ, ಋಷಿಗಳಿಂದ ಸೇವಿತನಾಗಿ. ವಾಯುಪುತ್ರನಾದ ಹನುಮಂತನನ್ನು ಸನ್ಮಾನಿಸಿ, ಸುಗ್ರೀವ ಮೊದಲಾದವರನ್ನು ಬೀಳ್ಕೊಟ್ಟು ಭರತನನ್ನು ಯುವರಾಜನನ್ನಾಗಿ ಮಾಡಿ, ಆಳುತ್ತಿದ್ದ ನಾಯಿಯೊಂ

ದರ ದೂರನ್ನು ಆಲಿಸಿ ಶತ್ರುಘ್ನನಿಂದ ಲವಣಾಸುರನನ್ನು ಕೊಲ್ಲಿಸಿ, ದುಷ್ಟರಾದವರನ್ನು ಕೊಲ್ಲುತ್ತ ವೇದವಿದರನ್ನು ಮನ್ನಿಸುತ್ತ ನಡೆದ ಆಗಸ್ತ್ಯರಿತ್ತ ಮಾಲೆ ಧರಿಸಿದವನು ನಮ್ಮನ್ನು ರಕ್ಷಿಸಲಿ.

ಯಜ್ಞಂ ತನ್ವನ್ಸ್ತ್ರಿಕೋಟೀನ್ವ್ಯತುದತ
ಭರತಾದ್ಯೋsಸುರಾನೀಶವಾಕ್ಯಾ
ದ್ದ್ವಾಸ್ಯನಾ ಮಾತ್ರಿಪುತ್ರಂ ಭುಜಮಥ
ಸನಯನ್ನಾತ್ಮ ಸೂನೂ ಸ್ವರಾಜ್ಯೇ ।
ಕೃತ್ವಾ ಶ್ರೀಹ್ರೀಹನೂಮದ್ಧೃತ ವಿಮಲ
ಚಲಸಚ್ಚಾಮರಚ್ಛತ್ರ ಶೋಭೀ
ಬ್ರಹ್ಮಾದ್ಯೈಃ ಸ್ತೂಯಮಾನೋ ನಿಜಪುರ
ವಿಲಸತ್ಪಾದ ಪದ್ಮೋsವತಾನ್ಮಾಮ್ ॥

ಅಶ್ವಮೇಧಯಾಗವನ್ನು ಮಾಡಿ, ಮೂರುಕೋಟಿ ದೈತ್ಯರನ್ನು ಭರತನಿಂದ ಕೊಲ್ಲಿಸಿ, ಅತ್ರಿಪುತ್ರರಾದ ದೂರ್ವಾಸರನ್ನು ಹಸಿವಿನಿಂದ ಮುಕ್ತರನ್ನಾಗಿ ಮಾಡಿ, ರುದ್ರದೇವನ ಪ್ರಾರ್ಥನೆಯಂತೆ ಶ್ವೇತ ದ್ವೀಪವನ್ನು ತಲುಪಿ, ತನ್ನ ಪುತ್ರರಾದ ಲವಕುಶರನ್ನು ರಾಜ್ಯದಲ್ಲಿ ಆಳಲು ನಿಯಮಿಸಿ, ಲಕ್ಷ್ಮೀ, ಹನುಮಂತ ಮೊದಲಾದವರಿಂದ ಛತ್ರ, ಚಾಮರಗಳಿಂದ ಸೇವಿತನಾಗಿ ಶ್ವೇತದ್ವೀಪದಲ್ಲಿ ವೈಭವದಿಂದ ಮೆರೆಯುತ್ತಿರುವ ಪಾದಪದ್ಮಗಳುಳ್ಳ ಶ್ರೀಹರಿಯೇ ಆದ ಶ್ರೀರಾಮ ನಮ್ಮನ್ನು ರಕ್ಷಿಸಲಿ.

ಹೀಗೆ ಹನ್ನೊಂದು ಶ್ಲೋಕಗಳಲ್ಲಿ ವಿಷ್ಣುವಿನ ರಾಮಾವತಾರದಿಂದ ಹಿಡಿದು, ಮತ್ತೆ ಮೂಲ ರೂಪದಿಂದ ಶ್ವೇತದ್ವೀಪಕ್ಕೆ ವಾಪಸಾಗುವವರೆಗಿನ ಕಥೆ ವರ್ಣಿತವಾಗಿದೆ. ಶ್ರೀರಾಮಚಂದ್ರನ ಪ್ರತಿಯೊಂದು ಲೀಲಾವೈಭವದ ಹಿಂದಿನ ಮಹತ್ವಪೂರ್ಣವಾದ ಭಕ್ತರಲ್ಲಿನ ಕರುಣೆ, ದುಷ್ಟನಿಗ್ರಹ– ಇವು ತಪ್ಪದೇ ಮೂಡಿ ಬಂದಿವೆ.

ಕೃತಿಯ ಕೊನೆಯಲ್ಲಿ ರಾಘವೇಂದ್ರರು :

ಇತಿ ಶ್ರೀರಾಮಚಾರಿತ್ರಮಂಜರೀ ಲೇಶತಃ
ಕೃತಾ ।
ರಾಘವೇಂದ್ರೇಣ ಯತಿನಾ ಭೂಯಾದ್ರಾಮ
ಪ್ರಸಾದದಾ ॥

'ಹೀಗೆ ಶ್ರೀರಾಮನ ದಿವ್ಯಚರಿತ್ರೆಯನ್ನು ಗೊಂಚಲಿನಂತೆ ಒಟ್ಟುಗೂಡಿಸಿ ಸ್ವಲ್ಪಮಾತ್ರ ಹೇಳಿದ್ದೇನೆ. ಇದು ಶ್ರೀರಾಮಚಂದ್ರನ ಕರುಣೆಯನ್ನು ಸದಾ ನೀಡುವ ಕೃತಿಯಾಗಲಿ'–ಎಂದು ಹರಸಿದ್ದಾರೆ.

ರಾಮಾಯಣ ಸಾಗರದಂತಹ ಕಥೆಯನ್ನು ಹನ್ನೊಂದು ಶ್ಲೋಕಗಳಲ್ಲಿಟ್ಟು ಆಸಕ್ತರಿಗೆ ಕೊಟ್ಟದ್ದು ಗುರುರಾಘವೇಂದ್ರರು ಹರಿಭಕ್ತರಲ್ಲಿಟ್ಟದ್ದ ಕರುಣೆಗೆ ಸಾಕ್ಷಿಯಾಗಿದೆ.

———

## ಬರಹಗಾರರ ಸಹಾಯಧನ ಯೋಜನೆ

ತಿ. ತಿ ದೇ. ಗಳ ಬರಹಗಾರರ ಸಹಾಯ ಧನಯೋಜನೆಯನ್ವಯ ಧಾರ್ಮಿಕ ಪುಸ್ತಕ ಪ್ರಕಟನೆಗಾಗಿ ದೇವಸ್ಥಾನಗಳ ಸಹಾಯಧನ ನೀಡುವ ಅಧಿಕೃತ ಒಪ್ಪಿಗೆಗೂ ಮೊದಲೇ ಹಲವು ಬರಹಗಾರರು ತಮ್ಮ ಪುಸ್ತಕಗಳಲ್ಲಿ ತಿ. ತಿ. ದೇ ಸಹಾಯದಿಂದ ಪ್ರಕಟವಾದ ಪುಸ್ತಕ ವೆಂಬ ಅಂಶವನ್ನು ಮುದ್ರಿಸುತ್ತಿರುವುದು ತಿಳಿದು ಬಂದಿದೆಯಾಗಿ, ಈ ಮೂಲಕ ಅಂತಹ ಪ್ರಯತ್ನಗಳನ್ನು ಖಂಡಿಸಿ, ತಿ ತಿ ದೇ. ಗಳ ಅಧಿಕೃತ ಅಂಗೀಕಾರದ ನಂತರವೇ ಯಾವುದೇ ಪುಸ್ತಕದಲ್ಲೂ 'ತಿ. ತಿ. ದೇ ಸಹಾಯ ಧನದಿಂದ ಮುದ್ರಿತವಾಗಿದೆ' ಎಂಬುದನ್ನು ಸೂಚಿಸಬೇಕೆಂದು ತಿಳಿಸಲಾಗಿದೆ. ಪೂರ್ವಾನುಮತಿಯಿಲ್ಲದೆ ಪ್ರಕಟಿಸಿದಲ್ಲಿ ಸಹಾಯಧನದ ಬಗ್ಗೆ ಯಾವುದೇ ರೀತಿಯ ಖಚಿತತೆಯನ್ನೂ ನೀಡಲಾಗದು ಎಂದು ಎಚ್ಚರಿಸಲಾಗಿದೆ.

## ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯ, ತಿರುಮಲೆ.

ಆರ್ಜಿತ ಕಲ್ಯಾಣೋತ್ಸವ ಮಾಡಿಸುವ ಆಸಕ್ತ ಭಕ್ತರಿಗೆ ಮತ್ತೊಂದು ಸುವಾರ್ತೆ ಎಂದರೆ; ಕಲ್ಯಾಣೋತ್ಸವವನ್ನು ರೂ. 500–00 ಶುಲ್ಕದಲ್ಲಿ ನಡೆಸುವ ಕ್ರಮವನ್ನು ಜಾರಿಗೆ ತರಲಾಗಿರುವುದು. ಇದರಲ್ಲಿ ಗೃಹಸ್ಥರನ್ನೂ ಸೇರಿಸಿದಂತೆ ಆರು ಜನರಿಗೆ ಮಾತ್ರ ಪ್ರವೇಶ. ಲಡ್ಡು ವಡೆಗಳ ಪ್ರಸಾದ ನೀಡಿಕೆ ಇಲ್ಲ. ಮಿಕ್ಕಂತೆ ಎಲ್ಲವೂ ರೂ. 2000–00 ಕಲ್ಯಾಣೋತ್ಸವದಂತೆಯೇ.

ಆಸ್ತಿಕ ಭಕ್ತರು ಈ ಅವಕಾಶವನ್ನು ಉಪಯೋಗಿಸಿಕೊಳ್ಳಬೇಕೆಂದು ವಿನಂತಿ.

**ತಿ. ತಿ. ದೇ.**

ಮುಂದಿನ ಸಂಚಿಕೆಯಲ್ಲಿ;

**ಸಪ್ತಗಿರಿ — ಮೇ 1982**

**ಅಹೋಬಿಲ ನರಸಿಂಹ** — ಶಾರದಾಮೂರ್ತಿ

**ಉತ್ತರ ಭಾರತದಲ್ಲಿ ಭಕ್ತಿ ಪ್ರಸಾರ** — ಕೆ. ರಮಾನಂದ

**ನರಸಿಂಹ ಸುಪ್ರಭಾತ** — ಮ. ರಂಗನಾಥ

**ವಿಶಿಷ್ಟಾದ್ವೈತ ಸಿದ್ಧಾಂತ** — ಕಂದಾಡೈ ಕೇಶವನ್

**ಅಮರ ಮೀರಾ** — ಪ್ರೇಮಾನಾರಾಯಣಮೂರ್ತಿ

**ಬುಡುಬುಡಿಕೆ ಪದ** — ಗುರುರಾಜಗುಡಿ

**ಜೊತೆಗೇ ಕಿಶೋರ ಜಗತ್, ಗೃಹಲಕ್ಷ್ಮಿ, ಇತ್ಯಾದಿ ಸ್ಥಿರ ಶೀರ್ಷಿಕೆಗಳು.**

**ನಿಮ್ಮ ಪ್ರತಿಯನ್ನು ಕಾಯ್ದಿರಿಸಿ.**

ಬೆಲೆ : ರೂ. 1–00 ಮಾತ್ರ



ಶ್ರೀ ಬಿ. ಎಸ್. ರೆಡ್ಡಿ, ಶ್ರೀ ಪ್ರಸಾದ್ ಅವರೊಡನೆ ನೂತನ ಮುಖ್ಯಮಂತ್ರಿಗಳು

## ಮುಖ್ಯಮಂತ್ರಿಯು ತಿರುಮಲೆ ದರ್ಶನ

ಆಂಧ್ರಪ್ರದೇಶದ ನೂತನ ಮುಖ್ಯಮಂತ್ರಿ ಶ್ರೀ ಭವನಂ ವೆಂಕಟರಾವ್ ಅವರು ಮಾರ್ಚ್ 4 ರಂದು ತಿರುಮಲೆಗೆ ಆಗಮಿಸಿ ಶ್ರೀ ವೆಂಕಟೇಶ್ವ ಸ್ವಾಮಿಯನ್ನು ದರ್ಶಿಸಿ ಆರಾಧಿಸಿದರು. ಆಲಯ ಮರ್ಯಾದೆಗಳೊಡನೆ ಅವರನ್ನು ಕಾರ್ಯನಿರ್ವಹಣಾಧಿಕಾರಿ ಶ್ರೀ ಪಿ ವಿ ಆರ್.ಕೆ. ಪ್ರಸಾದ್, ಕಾರ್ಯ ನಿರ್ವಾಹಕ ಮಂಡಳಿಯ ಅಧ್ಯಕ್ಷ ಶ್ರೀ ಬಿ. ನಾಗಿರೆಡ್ಡಿ ಮತ್ತಿತರರು ಸ್ವಾಗತಿಸಿದರು. ಶ್ರೀ ಯುತರಿಗೆ ತಿ. ತಿ. ದೇ. ಗಳ ಯಾತ್ರಿಕೋಪಯೋಗಿ ಕಾರ್ಯಕ್ರಮಗಳು, ಸಂಘ ಶಿಕ್ಷಣೋಪಯೋಗಿ ಕಾರ್ಯಕ್ರಮಗಳು ಹಾಗೂ ಧರ್ಮಪ್ರಸಾರ ಕಾರ್ಯಕ್ರಮಗಳ ಪರಿಚಯವನ್ನು ಮಾಡಿಕೊಡಲಾಯಿತು ಮುಖ್ಯ ಮಂತ್ರಿಗಳು ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯದಲ್ಲಿ ಸುಮಾರು ಹೊತ್ತು ಕಳೆದು ಅಲ್ಲಿನ ಜನಸಂದಣಿಯಾದರೂ ಪ್ರಶಾಂತ ವಾತಾವರಣವನ್ನೂ, ಆಲಯ ಕಾರ್ಯಕ್ರಮಗಳನ್ನೂ ಶ್ಲಾಘಿಸುತ್ತ ತಿ. ತಿ. ದೇ. ಗಳು ಇನ್ನೂ ಹೆಚ್ಚು ಹೆಚ್ಚಾಗಿ ಸಾಂಘಿಕ ಕ್ಷೇಮ, ಶಿಕ್ಷಣದತ್ತ ಗಮನ ನೀಡಿ ಯಾತ್ರಿಕೋಪಯೋಗಿ ಯೋಜನೆಗಳನ್ನು ತೀವ್ರಗೊಳಿಸಬೇಕೆಂದು ಸೂಚಿಸಿದರು.

## ತಿರುಚಾನೂರಿನಲ್ಲಿ ವಸಂತೋತ್ಸವ

ಬೆಂಗಳೂರಿನ ಶ್ರೀ ಓ. ಜಿ. ರಾಜುಲು ಅವರ ಪರವಾಗಿ ತಿರುಚಾನೂರಿನ ಅಲಮೇಲು ಮಂಗಾಂಬಿಕೆ ದೇವಾಲಯದಲ್ಲಿ 5–5–82 ರಿಂದ 7–5–82 ರ ವರೆಗೆ ಮೂರುದಿನಗಳ ಕಾಲ ವಸಂತೋತ್ಸವ ನಡೆಯುವುದಿದ್ದು ಮೂರು ದಿನಗಳೂ ವಿಶೇಷ ಕಾರ್ಯಕ್ರಮಗಳಿಂದ ಹೆಚ್ಚು ಭಕ್ತಾಕರ್ಷಕವಾಗುವುದೆಂದು ವರದಿಗಳು ತಿಳಿಸುತ್ತವೆ.

## ಉಚಿತ ನೇತ್ರ ಚಿಕಿತ್ಸಾ ಶಿಬಿರ

ತಿ. ತಿ ದೇ. ಗಳ ಮಾನವ ಸೇವಾಯೋಜನೆಗಳಲ್ಲಿ ಒಂದಾದ ಉಚಿತ ನೇತ್ರ ಪರೀಕ್ಷೆ–ಶಸ್ತ್ರ ಚಿಕಿತ್ಸೆಯ ಶಿಬಿರ 21 ನೆಯ ಬಾರಿಗೆ ತಿರುಪತಿಯಲ್ಲಿ ಒಂದು ವಾರಕಾಲ ನಡೆಯಿತು.

ಸ್ಥಳೀಯ ರೋಟರಿ ಕ್ಲಬ್‌ನ ಸಹಕಾರದಿಂದ ನಡೆದ ಈ ಶಿಬಿರವನ್ನು ಮಾರ್ಚಿ 7 ರಂದು ಆಂಧ್ರಪ್ರದೇಶದ ದೇವಾದಾಯ ಇಲಾಖಾ ಮಂತ್ರಿ ಶ್ರೀ ಪಿ. ವಿ. ಚೌದರಿಯವರು ಆಂಧ್ರಪ್ರದೇಶದ ಆರೋಗ್ಯ ಇಲಾಖಾ ಕಾರ್ಯದರ್ಶಿ ಶ್ರೀ ಎಸ್. ಗೋಪಾಲ ಕೃಷ್ಣ ಅವರ ಅಧ್ಯಕ್ಷತೆಯಲ್ಲಿ ಉದ್ಘಾಟಿಸಿದರು. ಶಿಬಿರದ ವರದಿಯನ್ನೋದುತ್ತ ಡಾ॥ ಉಷಾರಾಣಿಯವರು ಈ ಬಾರಿಯ ಶಿಬಿರದಲ್ಲಿ 4738 ಜನರ ನೇತ್ರ ಪರೀಕ್ಷೆ ನಡೆಯಿತೆಂದೂ, 630 ಜನರ ನೇತ್ರ ಶಸ್ತ್ರ ಚಿಕಿತ್ಸೆಯು ಆಯ್ಕೆ ನಡೆದಿದೆಯೆಂದೂ ತಿಳಿಸಿದರು. ತಿ. ತಿ. ದೇ ಗಳು ಈ ನೇತ್ರ ಪರೀಕ್ಷಾ ಶಿಬಿರವನ್ನು ವರ್ಷಕ್ಕೊಮ್ಮೆ ನಡೆಯುವಂತೆ ಏರ್ಪಡಿಸಬೇಕೆಂದೂ ತಿರುಪತಿಯಲ್ಲಿ ಯಾತ್ರಿಕ ಸಂದಣಿ ಕಡಿಮೆಯಾಗುವ ಜನವರಿ–ಫೆಬ್ರುವರಿಗಳಲ್ಲಿ ಇದು ನಡೆಯಬೇಕೆಂದೂ ರೋಟರಿ ಕ್ಲಬ್‌ನ ಪರವಾಗಿ ಮಾತನಾಡಿದ ಡಾ॥ ರಾಮಕೃಷ್ಣ ಅವರು ನುಡಿದರು. (ಈಗಣ ಶಸ್ತ್ರ ಚಿಕಿತ್ಸಾ ಶಿಬಿರದಲ್ಲಿ ಶಸ್ತ್ರ ಚಿಕಿತ್ಸೆ ಹೊಂದಿದವರಿಗೆ ಉಚಿತ ಸುಲೋಚನ ವಿತರಣೆ ರೋಟರಿ ಕ್ಲಬ್‌ನವರ ಪರವಾಗಿ ನಡೆಯುತ್ತದೆ) ತಿ. ತಿ. ದೇ. ಸಹಕಾರ್ಯನಿರ್ವಹಣಾಧಿಕಾರಿ ಶ್ರೀ ಡಿ. ಸುಬ್ಬರಾಯುಲು ಮಾತನಾಡುತ್ತ ಈ ನೇತ್ರ ಶಸ್ತ್ರ ಚಿಕಿತ್ಸಾಶಿಬಿರ ನಿಜವಾಗಿಯೂ ಉಚಿತವೆನ್ನಬೇಕಾದರೆ ಶಸ್ತ್ರ ಚಿಕಿತ್ಸೆ ಹೊಂದುವವರ ಹೋಗಿಬರುವ ವೆಚ್ಚವನ್ನೂ ತುಂಬ ಬೇಕಾಗುತ್ತದೆ ಎಂದು ಸೂಚಿಸಿದರು. (ತಿ.ತಿ.ದೇ ಗಳು ಈಗ ಶಸ್ತ್ರ ಚಿಕಿತ್ಸೆ ಹೊಂದುವವರ ಹಾಗೂ ಅವರನ್ನು ನೋಡಿ ಕೊಳ್ಳುವವರ ಊಟ ವಸತಿಗಳಿಗಾಗಿ 50000 ರೂಗಳನ್ನು ವೆಚ್ಚಿಸುತ್ತಿದೆ.)

ಉದ್ಘಾಟನಾ ಭಾಷಣ ಮಾಡಿದ ಶ್ರೀ ಪಿ ವಿ. ಚೌದರಿ ಅವರು ಶ್ರೀ ವೆಂಕಟೇಶ್ವರನ ಆಶೀರ್ವಾದವನ್ನು ಈ ಶಿಬಿರಾರ್ಥಿಗಳಿಗಾಗಿ ಹಾರೈಸುತ್ತ ತಿ ತಿ. ದೇ. ಇಂತಹ ಮಾನವೋಪಯೋಗಿ ಕಾರ್ಯಕ್ರಮಗಳಿಗಾಗಿ ಹೆಚ್ಚು ಹಣವನ್ನು ವೆಚ್ಚ ಮಾಡಿದಲ್ಲಿ ದೇಶ ದೃಢಕಾರ್ಯವಾಗುವುದರಲ್ಲಿ ಸಂಶಯವಿಲ್ಲವೆಂದರು.

ಈ ಶಿಬಿರದಲ್ಲಿ ಹೈದರಾಬಾದಿನ ಸರೋಜಿನಿ ದೇವಿ ನೇತ್ರ ಚಿಕಿತ್ಸಾ ಆಸ್ಪತ್ರೆಯ ಸಹಾಯದಿಂದ ಡಾ॥ ಶಿವಾರೆಡ್ಡಿ ಯವರು ನೇತ್ರ ಪರೀಕ್ಷೆ ಶಸ್ತ್ರ ಚಿಕಿತ್ಸೆಗಳನ್ನು ನಡೆಸಿದರು. ಪದ್ಮಭೂಷಣ ಡಾ॥ ಶಿವಾರೆಡ್ಡಿಯವರು ತಿರುಪತಿಯಲ್ಲಿನ ತಿ ತಿ. ದೇ. ನೇತ್ರ ಚಿಕಿತ್ಸಾ ಶಿಬಿರವನ್ನು ನಡೆಸುತ್ತಿರುವುದು ನಾಲ್ಕನೆಯ ಬಾರಿಗೆ. ಈಚೆಗೆ ಅವರಿಗೆ ಉತ್ತಮ ವೈದ್ಯಕೀಯ ಸೇವೆಗಾಗಿ ಬಿ.ಸಿ. ರಾಯ್ ಪ್ರಶಸ್ತಿ ದೊರೆತಿದೆ. ಉದ್ಘಾಟನಾ ಸಮಾರಂಭದಲ್ಲಿ ಮಾತನಾಡುತ್ತ ಡಾ॥ ಶಿವಾರೆಡ್ಡಿ ಅವರು ತಿ. ತಿ. ದೇ. ಗಳ ಈ ಯೋಜನೆಯನ್ನು ಶ್ಲಾಘಿಸುತ್ತ, ತಿರುಪತಿಯಲ್ಲಿ ತಿ. ತಿ. ದೇ. ಗಳು ಒಂದು ಸಂಚಾರಿ ನೇತ್ರ ಪರೀಕ್ಷಾ–ಚಿಕಿತ್ಸಾ ಆಸ್ಪತ್ರೆಯನ್ನು ಸ್ಥಾಪಿಸಬೇಕೆಂದು ಕರೆ ನೀಡಿದರು. ತಿ. ತಿ ದೇ ಗಳ ಡಾ॥ ಭಾಸ್ಕರ ರಾವ್ ಅವರು ಸಭೆಯನ್ನು ವಂದಿಸಿದರು.

---

Edited and Published on behalf of the T. T. Devastanams by K. Subba Rao, M. A, and Printed at
Idy. Manager T. T D Press Tirupati - 517 501·

# ಶ್ರೀ ವೆಂಕಟೇಶ್ವರಸ್ವಾಮಿಯವರ ದೇವಸ್ಥಾನ, ತಿರುಮಲೆ.

## ವಿವಿಧ ಆರ್ಜಿತ ಉತ್ಸವಗಳ ದರ ವಿವರಣೆ

| | |
|---|---|
| ವಿಶೇಷ ಪ್ರವೇಶ (ಸರ್ವದರ್ಶನ ಸಮಯದಲ್ಲಿ ಮಹಾದ್ವಾರದ ಬಳಿಯಲ್ಲಿ ಸರತಿಯಸಾಲಿನಲ್ಲಿ ಸೇರುವಿಕೆ) | ರೂ 25–00 |

### ಸೇವೆಗಳು

| | | |
|---|---|---|
| 1. | ಆಮಂತ್ರಣೋತ್ಸವ[1] | ರೂ 400 |
| 2. | ಅಭಿಷೇಕ* | ರೂ 500 |
| 3. | ಗಂಬುರ* | ರೂ 300 |
| 4. | ಪುನುಗು* | ರೂ 200 |
| 5. | ಜಾಫ್ರಾ* | ರೂ 100 |
| 6. | ಕಸ್ತೂರಿ* | ರೂ 100 |
| 7. | ಸಹಸ್ರಕಲಶಾಭಿಷೇಕ | ರೂ 3000 |
| 8. | ತಿರುಪ್ಪಾವಡಾ[2] | ರೂ 6000 |
| 9. | ಕೋಯಿಲ್ ಆಳ್ವಾರ್ ತಿರುಮಂಜನ | ರೂ 3000 |
| 10. | ಮುಕುರ ಮಂಟಪದಲ್ಲಿ ಡೋಲೋತ್ಸವ[2] | ರೂ 1500 |
| 11. | ಸಹಸ್ರದೀಪಾಲಂಕಾರ ಸೇವೆ | ರೂ 2000 |

### ಉತ್ಸವಗಳು

| | |
|---|---|
| ವಸಂತೋತ್ಸವ | ರೂ 3000 |
| ಕಲ್ಯಾಣೋತ್ಸವ | ರೂ 2000 |
| ಬ್ರಹ್ಮೋತ್ಸವ | ರೂ 750 |
| ತೆಪ್ಪೋತ್ಸವ[2] | ರೂ 2500 |
| ಪವಿತ್ರೋತ್ಸವ | ರೂ 2500 |

### ವಾಹನಗಳು

| | |
|---|---|
| ಬಂಗಾರದ ಗರುಡ, ಕಲ್ಪವೃಕ್ಷ, ಸೂರ್ಯಪ್ರಭ, ಸರ್ವಭೂಪಾಲ, ಪ್ರತಿ ಒಂದಕ್ಕೆ | ರೂ 125 |
| ಬೆಳ್ಳಿಯ ಗರುಡ, ಚಿಕ್ಕಶೇಷ, ಚಂದ್ರಪ್ರಭ, ಗಜ, ತುರಗ, ಹಂಸ, ಹನುಮಂತ ಪ್ರತಿ ಒಂದಕ್ಕೆ | ರೂ 100 |

1. ಆಮಂತ್ರಣೋತ್ಸವಕ್ಕೆ ಇಬ್ಬರಿಗೆ ಮಾತ್ರ ಪ್ರವೇಶ.

* 2,3,4,5,6, ಸೇವೆಗಳಿಗೆ ಒಬ್ಬರಿಗೆ ಮಾತ್ರ ಪ್ರವೇಶ.

2. ಈ ಸೇವೆಗಳಲ್ಲಿ ಐದು ಗ್ರಾಂನ ಚಿನ್ನದ ಪದಕವನ್ನು ಬಹೂಕರಿಸಲಾಗುವುದು·

ವಿವರಗಳಿಗೆ· **ಪೇಷ್ಕಾರ್, ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯ, ತಿರುಮಲೆ** ಇವರಿಗೆ ಬರೆಯಿರಿ

ಅಥವಾ **ತಿರುಮಲೆಯ ವಿಜಯಾ ಬ್ಯಾಂಕಿನಲ್ಲಿ** ವಿಚಾರಿಸಿ

---

# ತಿರುಮಲೆ ತಿರುಪತಿಗಳಲ್ಲಿ ವಸತಿ ಸೌಲಭ್ಯ

### ತಿರುಮಲೆ

| | | |
|---|---|---|
| ವಿಶೇಷ ರೀತಿಯ ಕಾಟೇಜುಗಳು | ದಿನವೊಂದಕ್ಕೆ | ರೂ75–00 |
| ಟಿ.ಬಿ ಸಿ ಒಳಗಿ ಕಾಟೇಜುಗಳು | ” | ರೂ 50–00 |
| ಎಸ್. ವಿ. ಅತಿಥಿಗೃಹ ತಿರುಮಲೆ | | |
| ಅ) ದೊಡ್ಡ ಕೋಣೆಗಳು | ,, | ರೂ 50–00 |
| ಆ) ಮೂಲೆಯ ಕೋಣೆಗಳು | ,, | ರೂ 40–00 |
| ಇ) ಕಿರಿಯ ಕೋಣೆಗಳು | ,, | ರೂ 35–00 |
| ಎಚ್. ಆರ್ ಜಿ. ಕಾಟೇಜು | ,, | ರೂ 150–00 |
| ಮದುವೆಯ ಹಾಲ್‌ಗಳು | | |
| ರೂಯಾ ಕಾಟೇಜು | ,, | ರೂ 80–00 |
| ಗೋಗಿನೇನಿ ಕಾಟೇಜು | ,, | ರೂ 80–00 |
| ಸಿ.ಸಿ. ಕಾಟೇಜು | ,, | ರೂ 100–00 |
| ಎಸ್.ಎಂ.ಸಿ. ಪೂರ್ವ ನಂ. 9 | ,, | ರೂ 50–00 |
| ಎ.ಟಿ.ಸಿ. ನಂ. 39 | ,, | ರೂ 80–00 |
| ಶಂಖುಮಿಟ್ಟ ಕಾಟೇಜುಗಳು (ಪೂರ್ತಿ) | | ರೂ 20–00 |
| ಶೇಷಾದ್ರಿನಗರ ,, | ,, | ರೂ 20–00 |
| ಅಂಜನಾದ್ರಿನಗರ ,, | ,, | ರೂ 20–00 |
| ಗರುಡಾದ್ರಿನಗರ ,, | ,, | ರೂ 20–00 |

ವಿವರಗಳಿಗೆ: ರಿಸೆಪ್ಷನ್ ಆಫೀಸರ್, ಟಿ.ಟಿ.ಡಿ. ತಿರುಮಲೆ

### ತಿರುಪತಿ

| | |
|---|---|
| ಶ್ರೀನಿವಾಸ ಸತ್ರ ಎರಡು ಹಾಸಿಗೆಗಳಕೋಣೆ | ರೂ 20–00 |
| ನಾಲ್ಕು ” | ರೂ 25–00 |
| ಒಂದು ” | ರೂ 15–00 |
| ಶ್ರೀ ಪದ್ಮಾವತಿ ಅತಿಥಿಗೃಹ | |
| ಹವಾನಿಯಂತ್ರಿತ 2 ಹಾಸಿಗೆಗಳ ಕೋಣೆ | ರೂ 50–00 |
| ,, ಒಂದು ಹಾಸಿಗೆಯ ಕೋಣೆ | ರೂ 30–00 |
| ಶ್ರೀ ವೆಂಕಟೇಶ್ವರ ಅತಿಥಿಗೃಹ | |
| ಎರಡು ಹಾಸಿಗೆಗಳ ಕೋಣೆ | ರೂ 20–00 |

ವಿವರಗಳಿಗೆ : ರಿಸೆಪ್ಷನ್ ಆಫೀಸರ್, ಟಿ.ಟಿ.ಡಿ. ತಿರುಪತಿ.

ತಿರುಮಲೆ–ತಿರುಪತಿಗಳಲ್ಲಿನ ವಸತಿಯನ್ನು ಕಾಯ್ದಿರಿಸಬಹುದು. ಆಯಾ ವಸತಿಸೌಕರ್ಯಕ್ಕೆ ಅನುಗುಣವಾದ ಹಣದ ಡಿ. ಡಿ. ಯನ್ನು ಕಳುಹಿಸುವಾಗ ಅಂಚೆ ವಿಳಾಸ ಹಾಗೂ ಅಪೇಕ್ಷಿತ ವಸತಿ ಸೌಕರ್ಯದ ವಿವರಗಳನ್ನು ಸ್ಪಷ್ಟವಾಗಿ ಇಂಗ್ಲೀಷಿನಲ್ಲಿ ಬರೆಯಿರಿ. ಅಪೇಕ್ಷಿತ ವಸತಿ ಸೌಕರ್ಯ ಲಭ್ಯವಿಲ್ಲದಾಗ ಇತರೆ ವಸತಿಯನ್ನು ಕಾಯ್ದಿರಿಸಿ ಹೆಚ್ಚಿನ ಹಣವನ್ನು ನೀವು ಇಲ್ಲಿ ಬಂದಾಗ ಹಿಂದಿರುಗಿಸಲಾಗುವುದು. ಕಾಯ್ದಿರಿಸಿದ ಬಗ್ಗೆ ಪತ್ರವನ್ನು ಕಳುಹಿಸಲಾಗುತ್ತದೆ, ಅದನ್ನು ತೆಗೆದುಕೊಂಡೇ ತಿರುಪತಿ; ತಿರುಮಲೆಗಳಿಗೆ ಬನ್ನಿರಿ. ಅಂಚೆಯಲ್ಲಿನ ವಿಳಂಬಕ್ಕೆ ತಿ.ತಿ.ದೇ. ಹೊಣೆಯಲ್ಲ. ಮೀಸಲಾತಿಯ ಹಕ್ಕು ತಿ.ತಿ.ದೇ. ಗಳದ್ದು.

ತಿರುಮಲೆ ತಿರುಪತಿ ದೇವಸ್ಥಾನ.

ಶ್ರೀ ವೆಂಕಟೇಶ್ವರ ಪರಬ್ರಹ್ಮಣೇನಮಃ

## ನೀವು ಹಿಂದೂಗಳಾಗಿದ್ದೀರಿ-ಹೆಮ್ಮೆ ಹೊಂದಿರಿ.

## ಅತಿಶ್ರೇಷ್ಠ ಪರಂಪರೆ ನಿಮ್ಮದೆಂಬುದನ್ನು ನೆನೆಯಿರಿ.

## ದೃಢವಾದ ತಾತ್ವಿಕ ತಳಹದಿಯನ್ನುಳ್ಳ ಹಿಂದೂಧರ್ಮವು ಧರ್ಮಗಳ ಧರ್ಮವಾಗಿದೆ.

## ನಿಜವಾದ ಹಿಂದೂಗಳಾಗಿರಿ-ಈ ಅಂಶಗಳನ್ನು ಗಮನಿಸಿ.

★ ನಿಮ್ಮ ಅಪೇಕ್ಷೆಯ ಸಂಕೇತವನ್ನು (ತಿಲಕ, ಗಂಧ, ವಿಭೂತಿ, ನಾಮ) ಹಣೆಯಲ್ಲಿ ಧರಿಸುವ ಆಚಾರವನ್ನು ಅಭ್ಯಸಿಸಿ.

★ ಸ್ನಾನದ ನಂತರ ದಿನಕ್ಕೊಮ್ಮೆಯಾದರೂ ನಾಮಜಪ ಮಾಡಿರಿ.

### ಹಲವು ನಾಮಜಪಗಳನ್ನು ಸೂಚಿಸಲಾಗಿದೆ ನಿಮಗಿಷ್ಟವಾದುದನ್ನು ಆಯ್ಕೆ ಮಾಡಿ ಕೊಳ್ಳಿರಿ.

ಓಂ ಶ್ರೀ ವೆಂಕಟೇಶಾಯ ನಮಃ
ಓಂ ನಮೋ ಭಗವತೇ ವಾಸುದೇವಾಯ
ಓಂ ನಮೋ ನಾರಾಯಣಾಯ
ಓಂ ನಮಃ ಶಿವಾಯ

ಹರೇ ರಾಮ ಹರೇ ರಾಮ
ರಾಮ ರಾಮ ಹರೇ ಹರೇ
ಹರೇ ಕೃಷ್ಣ ಹರೇ ಕೃಷ್ಣ
ಕೃಷ್ಣ ಕೃಷ್ಣ ಹರೇ ಹರೇ

★ ಪ್ರತಿ ದಿನವೂ ಶ್ರೀವೆಂಕಟೇಶ್ವರ ಸುಪ್ರಭಾತದ ಹತ್ತು ಶ್ಲೋಕಗಳನ್ನಾದರೂ ಹೇಳಿಕೊಳ್ಳಿರಿ

★ ವಾರಕ್ಕೊಮ್ಮೆ ನಿಮ್ಮ ಆಯ್ಕೆಯ ದೇವಾಲಯಕ್ಕೆ ಕುಟುಂಬದ ಎಲ್ಲ ಸದಸ್ಯರೊಂದಿಗೆ ಹೋಗಿ ದೇವರ ಪ್ರಾರ್ಥನೆ ಮಾಡಿರಿ.

★ ನಿಮ್ಮ ವಾಸಸ್ಥಳದಲ್ಲಿ 'ಓಂ'ಕಾರವನ್ನು ಹಚ್ಚಿರಿ.

★ ಭಗವದ್ಗೀತೆಯ ಒಂದು ಶ್ಲೋಕವನ್ನಾದರೂ ದಿನಕ್ಕೊಮ್ಮೆ ಪಠಿಸಿರಿ.

★ ಹಿಂದೂ ಧಾರ್ಮಿಕ ಸಾಮಾಜಿಕ ಹಬ್ಬಗಳಲ್ಲಿ ಭಾಗವಹಿಸಿರಿ.

---

**ಅವನಲ್ಲಿ ನಂಬಿಕೆಯಿಡಿ-ಅವನು ನಿಮ್ಮನ್ನು ಕಾಪಾಡುತ್ತಾನೆ.**

---

ತಿರುಮಲೆ ತಿರುಪತಿ ದೇವಸ್ಥಾನಗಳು
ತಿರುಪತಿ.